# ಗದಾಯುದ್ಧ ನಾಟಕಂ



"ಶ್ರೀ"



ಕರ್ಣಾಟಕ ಸಂಘ
ಸೆಂಟ್ರಲ್ ಕಾಲೇಜು, ಬೆಂಗಳೂರು
೧೯೩೦

# ವಿಜ್ಞಾಪನೆ

---

ಈಗ್ಗೆ ಸುಮಾರು ಐದು ವರ್ಷಗಳ ಹಿಂದೆ, ಎಂದರೆ ೧೯೨೫ ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಸಂಘದವರು ಒಂದು ನಾಟಕ ವನ್ನು ಆಡಬೇಕೆಂದು ಸಂಕಲ್ಪಿಸಲು ಆಗ ಆ ಸಂಘದ ಅಧ್ಯಕ್ಷರಾಗಿದ್ದ ಮ|| ಬಿ. ಎಂ. ಶ್ರೀಕಂಠಯ್ಯನವರು ರನ್ನನ "ಗದಾಯುದ್ಧ" ವನ್ನು ನಾಟಕ ರೂಪಕ್ಕೆ ತಿರುಗಿಸಿ ಕೊಟ್ಟರು. ಅದನ್ನು ಆ ಸಂಘದ ಸದಸ್ಯರು ಮೈಸೂರಿನಲ್ಲಿಯೂ, ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದವರು ಬೆಂಗಳೂರಿನಲ್ಲಿಯೂ, ಇಬ್ಬರೂ ಸೇರಿ ಉತ್ತರ ಕರ್ಣಾ ಟಕದ ಕೆಲವು ಸ್ಥಳಗಳಲ್ಲಿಯೂ ಅಭಿನಯಿಸಿದರು.

"ಗದಾಯುದ್ಧವು ಒಂದು 'ರಸ ಘಟ್ಟಿ' ; ಆದರೆ ಅದರಲ್ಲಿ ಚರಿತ್ರೆ ಯೆಂಬ ಕಸವು ಸಿಕ್ಕಿಕೊಂಡಿದೆ. ಅದನ್ನು ಶೋಧಿಸಿ ತೆಗೆದು ಹಾಕಿ ಬಿಟ್ಟರೆ ಉಳಿದ ಕಾವ್ಯವು ಎಂಥ ರಸಾಯನವಾಗುವುದೆಂಬುದನ್ನು 'ಗದಾಯುದ್ಧ ನಾಟಕ'ದಲ್ಲಿ ನೋಡಬಹುದು". ಇದು ಕನ್ನಡಿಗರೆಲ್ಲ ರಿಗೂ ದೊರೆಯುವಂತಾಗಲೆಂದು ಯೋಚಿಸಿ ಕರ್ಣಾಟಕ ಸಂಘವು ಇದನ್ನು "ಪ್ರಬುದ್ಧ ಕರ್ಣಾಟಕ"ದ ಎಂಟನೆಯ ಸಂಪುಟದಲ್ಲಿ ಪ್ರಕಟಿ ಸಿತು. ಇದು ಈ ವರ್ಷದ ಇಂಟರ್‌ಮೀಡಿಯೆಟ್ ಪರೀಕ್ಷೆಗೆ ಪಠ್ಯ ಪುಸ್ತಕವಾಗಿರುವುದರಿಂದ ಈಗ ಹೀಗೆ ಪುಸ್ತಕರೂಪವಾಗಿ ಬಂದಿದೆ. ಇದನ್ನು ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗೆ ಸಹಾಯವಾಗಲೆಂದು ಮುಂದೆ "ರನ್ನಕವಿಪ್ರಶಸ್ತಿ"ಯಿಂದಲೂ "ಕವಿಚರಿತೆ"ಯಿಂದಲೂ ಕೆಲವು ಭಾಗಗಳನ್ನು ಆರಿಸಿ ಸಂಗ್ರಹವಾದ ಒಂದು "ಕವಿಕಾವ್ಯ ಪ್ರಶಸ್ತಿ"ಯನ್ನು ಮಾಡಿ ಸೇರಿಸಿದೆ.

ಈ ಪುಸ್ತಕ ಪೀಠಿಕೆಗಳನ್ನು ಈ ರೂಪಕ್ಕೆ ತಂದು ಪ್ರಕಟಪಡಿ ಸಲು ನೆರವಾದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು, ಪ್ರಾಕ್ತನ

ವಿಮರ್ಶ ವಿಚಕ್ಷಣ ರಾವ್ ಬಹದ್ದೂರ್ ಆರ್. ನರಸಿಂಹಾಚಾರ್ಯರು ಮತ್ತು "ಮೈಸೂರು ವಿಶ್ವವಿದ್ಯಾನಿಲಯ ಸಂಘ"ದ ಅಧಿಕಾರಿಗಳು ಇವರಿಗೂ, ಇದನ್ನು ಪಠ್ಯ ಪುಸ್ತಕವಾಗಿ ನಿಯಮಿಸಿದ ವಿಶ್ವವಿದ್ಯಾನಿಲಯದ ಅಧಿಕಾರಿಗಳಿಗೂ, ಕರ್ಣಾಟಕ ಸಂಘವು ಕೃತಜ್ಞವಾಗಿದೆ.

ಸೆಂಟ್ರಲ್ ಕಾಲೇಜು
ಬೆಂಗಳೂರು ೧೯೩೦

**ಕರ್ಣಾಟಕ ಸಂಘ**



# ಶುದ್ಧಿ ಪತ್ರ

---

| ಪುಟ | ಪದ್ಯ | ಪಾದ | ಅಶುದ್ಧ | ಶುದ್ಧ |
|---|---|---|---|---|
| ೩ | ೮ | ೭ | ಮುನ್ನಿಸಿ | ಮುಟ್ಟಿಗ್ಗಿಸಿ |
| ೧೮ | ೨೧ | ೩ | ಮರುಳಸೊ | ಮರುಳೆಯೊ |
| ೨೭ | ೧೦೬ | ೨ | ಉಟೀದಸೊ | ಉಳಿದಸೊ |
| ೨೯ | ೧೧೫ | ೨ | ದುರ್ಯೋಧನಾಂಕಸನೆ | ದುರ್ಯೋಧನಾಂಕಸೆನೆ |
| ೩೧ | ೧೨೧ | ೪ | ಕೌರವಮುಲ್ಲಂ | ಕೌರವಭೀಮಂ |
| ೩೭ | ೧೪೪ | ೨ | ಪಿಡಿದುಡಂ ಸಲೆ | ಪಿಡಿದುದಂ ಪಿಡಿದಂ ಸಲೆ |
| ೩೮ | ೧೪೪ | ೪ | ಅಣ್ಮುಗುಂದದೆಸಲ್ | ಅಣ್ಮುಗುಂದಸೆ ದಲ್ |



# ಶ್ರೀ ಕವಿರತ್ನ ರನ್ನ

---

ರಸಿಕರೊಳಗೆ ಚಿನ್ನ, ಕವಿಜನದೊಳು ರನ್ನ,
ವಿಶದ ವಿಜ್ಞಾನ ಸಂಪನ್ನ ।
ವಸುಧೇಶ ಸಭೆಯು ಪಂಡಿತರೊಳು ಸನ್ಮಾನ್ಯ,
ಕುಶಲಿ ಕವಿರನ್ನ ನೀ ಧನ್ಯ ॥

*　　*　　*

ಸಾಹಸಭೀಮನ ಸಾಹಸ ವರ್ಣನೆ
ಯೂಹಿಸೆ ಕನ್ನಡನಾಡ ।
ಆಹವಮಲ್ಲರ ವಿಾರಿದ ಸಾಹಸೋ
ತ್ಸಾಹ ವರ್ಣನೆಯುಲ್ತೆ ರನ್ನ ! ॥

(ಮ॥ ಎಲ್. ಗುಂಡಪ್ಪನವರಿಂದ)

---

# ಕವಿಕಾವ್ಯ ಪ್ರಶಸ್ತಿ

ರನ್ನನು ಸರಸ್ವತಿಯ ರನ್ನನು. ಆತನ ನಿಸರ್ಗ ಕವಿತಾ ಪ್ರಭಾವದೊಡನೆ, ಒಳ್ಳೆಯ ಶಿಕ್ಷೆಯೂ ಆತನಿಗೆ ಲಭಿಸಿತು. ಸಂಸ್ಕೃತದಲ್ಲಿಯೂ, ಕನ್ನಡದಲ್ಲಿಯೂ ಒಳ್ಳೆಯ ಪಾಂಡಿತ್ಯವನ್ನು ಸಂಪಾದಿಸಿ ಮುನ್ನುಡಿ ದನು. ಆ ಕಾಲದ ಅಧಿಕಾರಿಗಳಲ್ಲಿಯೂ ರಾಜರಲ್ಲಿಯೂ ಗಣ್ಯನಾಗಿ, ಆಶ್ರಯವನ್ನೂ ಬಿರುದುಗಳನ್ನೂ ಪಡೆದನು. 'ಅಜಿತಪುರಾಣ'ವೆಂಬ ಧಾರ್ಮಿಕ ಗ್ರಂಥದಲ್ಲಿಯೂ, 'ಸಾಹಸಭೀಮ ವಿಜಯ' * ವೆಂಬ ಲೌಕಿಕ ಗ್ರಂಥದಲ್ಲಿಯೂ ತನ್ನ ಮಹತ್ತ್ವನ್ನು ತನ್ನ ಹಿಂದೆ ಬಿಟ್ಟು ಹೋಗಿದ್ದಾನೆ. 'ಪರಶುರಾಮ ಚರಿತೆ' ಎಂಬ ಮೊಟ್ಟ ಮೊದಲು ಬರೆದ ಗ್ರಂಥ ನಮಗೆ ಸಿಕ್ಕಿಲ್ಲ. ಈ ಮೂರು ಗ್ರಂಥಗಳನ್ನೂ "ರತ್ನತ್ರಯ"ಗಳೆಂದು ಕರೆದಿದ್ದಾನೆ. ಅಜಿತಪುರಾಣದಲ್ಲಿ ತನ್ನ ಮತವಾದ ಜೈನ ಮತವನ್ನು ಪ್ರತಿಪಾದಿಸಿರುತ್ತಾನೆ. ಇದರಲ್ಲಿ ರನ್ನನ ಕವಿತಾಶಕ್ತಿಗೆ ಸರಿಯಾದ ಅವಕಾಶವಾಗಲಿಲ್ಲ. ವಿಷಯವೂ ಮತಾಭಿಮಾನಿಗಳಲ್ಲದವರಿಗೆ ಅಷ್ಟು ರುಚಿಸಲಾರದು. ಸಾಹಸಭೀಮ ವಿಜಯದಲ್ಲಾದರೋ ಸರ್ವರಿಗೂ ಆದರಣೀಯವಾದ ಮಹತ್ತ್ವದ ಕಥೆಯೂ, ಮಹಾ ವೀರನಾಯಕರೂ, ರಸೋತ್ಪಾದನೆಗೆ ಅನುಕೂಲವಾದ ಸನ್ನಿವೇಶಗಳೂ, ಪಂಪನ, ಭಟ್ಟನಾರಾಯಣನ, ಒಂದುವೇಳೆ ಭಾಸನ ಪ್ರೇರಣೆಯೂ ಒದಗಿ, ರನ್ನನ ಪ್ರತಿಭೆ ಉಕ್ಕಿ ಹರಿದು, ಬಹುಶಃ ಕನ್ನಡದಲ್ಲಿ ಪರಮೋತ್ಕೃಷ್ಟವಾದ ಕಾವ್ಯಗಳಲ್ಲಿ ಒಂದು ಎಂದು ಹೇಳಬಹುದಾದ ಕಾವ್ಯರತ್ನವಾಗಿ ಫಲಿಸಿರುವುದು. ಇದರ ನಾಟಕ ಸಂವಿಧಾನವೂ, ದುರ್ಯೋಧನ ಪಾತ್ರಕಲ್ಪನೆಯೂ,

* ಸಾಹಸಭೀಮವಿಜಯದ ಆಶ್ವಾಸಗಳ ಕಡೆಯ ಗದ್ಯಗಳಲ್ಲಿ "ಚಾಳುಕ್ಯ ಚಕ್ರವರ್ತಿ ಶ್ರೀ ಸಾಹಸಭೀಮ ವಿಜಯ"ವೆಂದು ಸ್ಪಷ್ಟವಾಗಿ ಹೇಳಿರುವುದರಿಂದ ಇದೇ ಚಕ್ರೇಶ್ವರಚರಿತೆ ಎಂದು ರನ್ನನು ಹೇಳಿರುವ ಗ್ರಂಥವೆಂದು ತೋರುತ್ತದೆ.

ಸಮಯೋಚಿತವಾದ ಭಾವಗಳೂ, ರಸಪ್ರವಾಹವೂ, ಶೈಲಿಯೂ ಅದ್ವಿತೀಯವಾಗಿರುವುವು. ಮೆಚ್ಚಿಸುವುದಕ್ಕೆ ಸುಲಭನಲ್ಲದ ಎಂತಹ ವನಾದರೂ ಈ ಕಾವ್ಯಕ್ಕೆ ಬೆರಗಾಗಿ, ಇಂತಹ ಕವಿಯನ್ನೂ, ಇಂತಹ ಕಾವ್ಯವನ್ನೂ ಪಡೆದಿರುವ ಕನ್ನಡವು ಧನ್ಯವೆಂದು ಹೇಳದಿರಲಾರನು. ರನ್ನನ ಕೃತಿ ರತ್ನವನ್ನು ಪರೀಕ್ಷಿಸುವವನಿಗೆ ಎದೆ ಎಷ್ಟು? ಎಂದು ಕವಿ ಮೂದಲಿಸಿರುವುದು ಕೇವಲ ಗರ್ವದ ಮಾತಲ್ಲವೆಂದು ಈ ಕಾವ್ಯವೆನ್ನಿಸುವುದು.

ಆದರೂ ಈ ಕಾಲದ ವಾಚಕರು ಇಂತಹ ಉತ್ತಮ ಕವಿಯ ಗ್ರಂಥಗಳನ್ನು ಓದುವಾಗ ಕೂಡ ಸ್ವಲ್ಪ ಪರೀಕ್ಷೆಮಾಡುವುದು ಅವರ ಕರ್ತವ್ಯ. ನಾವು ಬಹುಮಾನಿಸತಕ್ಕ ಪುರುಷನು ರನ್ನ ಪಂಡಿತನಲ್ಲ, ರನ್ನ ಶಾಸ್ತ್ರಿಯಲ್ಲ, ರನ್ನ ಕವಿ. ಸಾಹಿತ್ಯಶಾಸ್ತ್ರ, ಧರ್ಮಶಾಸ್ತ್ರ, ಮತಸಿದ್ಧಾಂತ ಮುಂತಾದುವುಗಳಲ್ಲಿ ಕಾಲಾನುಗುಣ ವಾಗಿ ಶ್ರದ್ಧೆಯೂ ರುಚಿಯೂ ಬದಲಾಯಿಸುತ್ತಿರುವುದು ಸ್ವಭಾವ. ಒಂದು ರುಚಿಗೆ, ಒಂದು ಶ್ರದ್ಧೆಗೆ ಹಿತವಾದ ವಿಷಯ ಮತ್ತೊಂದು ರುಚಿಗೆ, ಮತ್ತೊಂದು ಶ್ರದ್ಧೆಗೆ ಹಿತವಾಗದಿರಬಹುದು. ರನ್ನನಲ್ಲಿ ಕೂಡ ಒಂದು ಕಾಲಕ್ಕೆ ಸುಂದರವಾದ, ಮತ್ತೊಂದು ಕಾಲಕ್ಕೆ ಅಷ್ಟು ಸುಂದರವಲ್ಲದ, ಅಂಶಗಳಿರಬಹುದು. ಪ್ರಪಂಚದ ಮನುಷ್ಯ ಮಾತ್ರನಾದ ಯಾವ ಕವಿಚಕ್ರವರ್ತಿಯಲ್ಲಾಗಲಿ ಕುಂದು ಕೊರತೆ ಗಳಿಲ್ಲವೆಂದಾಗಲಿ, ಕಲಾ ಸೌಂದರ್ಯದ ವಿಷಯದಲ್ಲಿ ತಪ್ಪು ತಿಳಿವಳಿಕೆ ಗಳಿಲ್ಲವೆಂದಾಗಲಿ, ಸರಿಯಾಗಿರುವ ಕಡೆಗಳಲ್ಲಿ ಕೂಡ ಕವಿತಾ ಶಕ್ತಿ ತನ್ನ ಗುರಿಯನ್ನು ನೇರವಾಗಿ ಹೋಗಿ ಮುಟ್ಟಿರುವುದೆಂದಾಗಲಿ ಸಾಧಿಸುವುದು ಮೂಢಭಕ್ತಿ. ಇದರಿಂದ ಪ್ರಯೋಜನವಿಲ್ಲ. ಕೊನೆಗೆ ನಿಲ್ಲುವುದು ಅಭಿಮಾನವಲ್ಲ, ಸತ್ಯ.

ಆದುದರಿಂದ ರನ್ನನನ್ನು ಪರೀಕ್ಷೆಮಾಡಿ; ರನ್ನನನ್ನೂ ಬಿಡದೆ ವಿಮರ್ಶೆಮಾಡಿ. ಆತನ ಕವಿತಾಶಕ್ತಿ ಎಷ್ಟು? ಆತನು ನಿರ್ಮಿಸಿರುವ ಲೋಕ ಯಾವುದು? ಅದರ ಸೌಂದರ್ಯ, ಅದರ ಘನತೆ ಏನು? ಆತನು

ಮೂರ್ತಿಗಳಾಗಿ ಕಡೆದಿರುವ ವ್ಯಕ್ತಿಗಳು ಯಾರು? ಅವರ ಜೀವ ರಹಸ್ಯವನ್ನು ಭೇದಿಸಿ, ಅವರ ಮಾನುಷಾಮಾನುಷ ಸ್ವರೂಪವನ್ನು ಎಷ್ಟು ಮಟ್ಟಿಗೆ ನಮ್ಮ ಕಣ್ಣಿಗೆ ಕಟ್ಟಿದ್ದಾನೆ? ಆತನ ಭಾವಗಳು, ಬೋಧನೆಗಳು, ಧರ್ಮತತ್ತ್ವಗಳು ಯಾವುವು? ಅವು ಎಷ್ಟು ಮಟ್ಟಿಗೆ ಸರ್ವ ಸಮ್ಮತವಾದುವು? ಉತ್ಸಾಹ ಜನಕವಾದುವು? ನಮಗೂ ಆತನಿಗೂ ಎಷ್ಟು ದೂರ ಸಮಾನ ದೃಷ್ಟಿ? ಎಲ್ಲಿ ನಾವೂ ಆತನೂ ಒಡೆಯಬೇಕಾದೀತು? ಆತನ ಕಾವ್ಯನಿರೂಪಣೆಯ ಕ್ರಮ ವೇನು? ಆಕಾರವೇನು, ಆತ್ಮವೇನು? ರೀತಿಯೇನು, ಶೈಲಿಯೇನು? ಕನ್ನಡದ ಜಿಗಿಯೇನು, ಸೊಬಗೇನು, ಇಂಪೇನು, ಸೊಂಪೇನು? ರನ್ನ ನನ್ನೂ ನಿಲ್ಲಿಸಿ ಪ್ರಶ್ನೆಮಾಡಿ, ಪರೀಕ್ಷೆಮಾಡಿ ಜಳ್ಳು, ತೂರಿ, ಕಾಳನ್ನು ತುಂಬಿಕೊಳ್ಳಿ—ಸಾಹಿತ್ಯಕಲಾ ಪುತ್ರರ ಆತ್ಮಪುಷ್ಟಿಗಾಗಿ.

—(ರನ್ನಕವಿ ಪ್ರಶಸ್ತಿ; ಮುನ್ನುಡಿ, ಪುಟ ೪–೬)

---

ಈತನು ಅಜಿತಪುರಾಣವನ್ನೂ ಸಾಹಸಭೀಮವಿಜಯವನ್ನೂ ರನ್ನ ರನ್ನ ಕಂದವೆಂಬ ಒಂದು ನಿಘಂಟುವನ್ನೂ ಬರೆದಿದ್ದಾನೆ. ಅಲ್ಲದೆ, ಅಜಿತಪುರಾಣದ ಕೊನೆಯಲ್ಲಿರುವ—

ಕರಮೆಸೆದುವು ರತ್ನತ್ರಯು। ಪರಿಕಲ್ಪದೆ ಪರಶುರಾಮಚರಿತಂ ಚಕ್ರೇ।
ಶ್ವರಚರಿತಮಜಿತತೀರ್ಥೇ। ಶ್ವರಚರಿತಂ ರತ್ನನಿಂದೆ ಭುವನತ್ರಯದೊಳ್॥

ಎಂಬ ಪದ್ಯದಿಂದ ಈತನು ಪರಶುರಾಮಚರಿತ, ಚಕ್ರೇಶ್ವರಚರಿತ, ಎಂಬ ಬೇರೆ ಎರಡು ಗ್ರಂಥಗಳನ್ನು ಸಹ ಬರೆದ ಹಾಗೆ ತಿಳಿಯುತ್ತದೆ. ಸಾಹಸಭೀಮವಿಜಯದಲ್ಲಿಯ "ಗಂಗಮಂಡಲಚಕ್ರೇಶ್ವರಕಟಕೋತ್ತಮನಾಯಕವಿರಚನೆಯಿನಸಮರ್ಥ್ಯರತ್ನಮಾದಂ ರತ್ನಂ" ಎಂಬ ವಾಕ್ಯವನ್ನು ನೋಡಿದರೆ ಈತನ ಚಕ್ರೇಶ್ವರಚರಿತೆ ಗಂಗರಾಜನ ಸೇನಾನಾಯಕನಾದ ಮತ್ತು ತನ್ನ ಪೋಷಕನಾದ ಚಾವುಂಡರಾಯನ ವಿಷಯವಾದ ಗ್ರಂಥವೆಂದು ತೋರುತ್ತದೆ. ಈ ಪರಶುರಾಮ ಚರಿತವೂ ಚಕ್ರೇಶ್ವರಚರಿತವೂ ನಮಗೆ ದೊರೆತಿಲ್ಲ.

ಈ ಕವಿಯ ವಿಷಯವಾಗಿ ಇವನ ಗ್ರಂಥಗಳಿಂದ ಈ ಸಂಗತಿಗಳು ತಿಳಿಯುತ್ತವೆ :—

ಈತನು ಜೈನಕವಿ ; ಬೆಳುಗರೆ ನಾಡಿನಲ್ಲಿರುವ ಬೆಳುಗಲಿ ಐನೂರಿನಲ್ಲಿಯ ಜಂಬುಖಂಡಿ ಎಪ್ಪತ್ತರಲ್ಲಿ ಶ್ರೇಷ್ಠವಾದ ಮುದುವೊಳಲಲ್ಲಿ ಸೌಮ್ಯಸಂವತ್ಸರದಲ್ಲಿ (೯೪೯) ಹುಟ್ಟಿದನು ; ಬಳೆಗಾರಕುಲಕ್ಕೆ ಸೇರಿದವನು. ಈತನ ತಾಯಿ ಅಬ್ಬಲಬ್ಬೆ ; ತಂದೆ ಜಿನವಲ್ಲಭೇಂದ್ರ ; ಸಹೋದರರು ದೃಢಬಾಹು, ರೇಚಣ, ಮಾರಯ್ಯ ; ಹೆಂಡತಿಯರು ಜಕ್ಕಿ, ಶಾಂತಿ ; ಮಗ ರಾಯ ; ಮಗಳು ಅತ್ತಿಮಬ್ಬೆ. ಇವನ ಗುರು **ಅಜಿತಸೇನಾಚಾರ್ಯ**[1] ; ಸ್ವಾಮಿ ಚಾವುಂಡರಾಯ. ಇವನಿಗೆ ತೈಲಪನು (೯೭೩-೯೯೭) ಕವಿಚಕ್ರವರ್ತಿಯೆಂಬ ಬಿರುದನ್ನು ಕೊಟ್ಟನು.[2] ಈತನು ಮೊದಲು ಸಾಮಂತರಲ್ಲಿಯೂ ಮಂಡಲೇಶ್ವರರಲ್ಲಿಯೂ ಇದ್ದು ಬಳಿಕ ಸತ್ಯಾಶ್ರಯನಲ್ಲಿ (೯೯೭-೧೦೦೯) "ಉದಯಪರಂಪರೆಯ" ನ್ನು ಹೊಂದಿದನು ; ಕನಕದಂಡ, ಚಾಮರ, ಆನೆ, ಛತ್ರ ಮೊದಲಾದ ಬಿರುದುಗಳನ್ನು ಪಡೆದಿದ್ದನು. ಅಜಿತಪುರಾಣವನ್ನು ಶಕ ೯೧೫ ನೆಯ ವಿಜಯವರ್ಷದಲ್ಲಿ—ಎಂದರೆ ಕ್ರಿ. ಶ. ೯೯೩ ರಲ್ಲಿ—ಬರೆದನು.

ಈತನಿಗೆ ಕವಿರತ್ನ, ಅಭಿನವಕವಿಚಕ್ರವರ್ತಿ, ಕವಿಕುಂಜರಾಂಕುಶ, ಕವಿಚಕ್ರವರ್ತಿ, ಉಭಯಕವಿ, ಎಂಬ ಬಿರುದುಗಳುಂಟು. ಅಲ್ಲದೆ—

ಕವಿಮುಖಚಂದ್ರಂ ಕವಿಚ | ಕ್ರವರ್ತಿ ಕವಿರಾಜಶೇಖರಂ ಕವಿರಾಜಂ |
ಕವಿಜನಚೂಡಾರತ್ನಂ | ಕವಿತಿಲಕಂ ಕವಿಚತುರ್ಮುಖಂ ಕವಿರತ್ನಂ ||

ಎಂಬ ಪದ್ಯದಲ್ಲಿ ಇತರ ಬಿರುದುಗಳನ್ನೂ ಹೇಳಿಕೊಂಡಿದ್ದಾನೆ.

ಈತನು ತನಗೆ ಹಿಂದೆ ಇದ್ದ ಕವಿಗಳಲ್ಲಿ ಪಂಪನನ್ನೂ ಹೊನ್ನನನ್ನೂ

---

1. ಈತನೇ ಚಾವುಂಡರಾಯನಿಗೂ ಮೊದಲನೆಯ ನಾಗವರ್ಮನಿಗೂ ಗುರು.

2. ಪಡೆಯಿಡೆಯ ಕಡೆಯ ಬಡವರ್ | ಕುಡೆ ಪಡೆದನೊ ಚಕ್ರವರ್ತಿಯೊಳ್ ತೈಲಪನೊಳ್ |
ಪಡೆದಂ ಮಹಿಮೋನ್ನತಿಯಂ | ಪಡೆದಂ ಕವಿಚಕ್ರವರ್ತಿವೆಸರಂ ರನ್ನಂ ||

ಜನ್ನನೂ ಈಯಂಶವನ್ನು ಹೇಳಿದ್ದಾನೆ. ಜನ್ನನ ಚರಿತೆಯನ್ನು ನೋಡಿ.

ಹೊಗಳಿ ಅವರ ವಿಷಯವಾಗಿಯೂ ತನ್ನ ವಿಷಯವಾಗಿಯೂ ಹೀಗೆ ಬರೆದಿದ್ದಾನೆ.—ಪಂಪನಿಂದ 'ಪುಣ್ಯಭವೋನ್ನತಿ ನೆಗೆಳ್ದುದು.' 'ಅವನ ಗುಣದೊಳಗೆಸೆದಿರ್ದ' ಉಭಯ ಕವಿಚಕ್ರವರ್ತಿಗೂ (ಪೊನ್ನ) ಅಭಿನವಕವಿಚಕ್ರವರ್ತಿಗೂ (ತಾನು) ಸಮಾನರುಂಟೇ? ಕವಿಗಳಲ್ಲಿ ಕವಿತಾಗುಣಾರ್ಣವ (ಪಂಪ), ಕವಿರತ್ನ, ಇವರಿಬ್ಬರೇ ಪುಣ್ಯವಂತರು; ಇವರಿಬ್ಬರೇ ಕೃತಾರ್ಥರು. ಆದಿಪುರಾಣವನ್ನು ರಚಿಸಿದುದರಿಂದ ಪಂಪನು ದ್ವಿಜವಂಶಧ್ವಜವಾದನು. ಅಜಿತಪುರಾಣವನ್ನು ರಚಿಸಿದುದರಿಂದ ರನ್ನನು ವೈಶ್ಯವಂಶಧ್ವಜವಾದನು. ಹಿಂದೆ ಪಂಪನೂ ಪೊನ್ನನೂ ರಟ್ಟರಾಜ್ಯದಲ್ಲಿ ಪ್ರಖ್ಯಾತರಾದರು; ಉಭಯಕವಿಯಾದ ಕವಿರತ್ನನು ಚಾಳುಕ್ಯರಾಜ್ಯದಲ್ಲಿ ಪ್ರಖ್ಯಾತನಾದನು.

—(ಕವಿಚರಿತೆ, ಸಂಪುಟ ೧, ಪುಟ ೬೨–೬೩)

ರನ್ನನು 'ಗದಾಯುದ್ಧ'ದ ಕಟ್ಟಡವನ್ನು 'ಪಂಪ ಭಾರತ'ದ ಹದಿಮೂರನೆಯ ಆಶ್ವಾಸದ * ತಳಹದಿಯ ಮೇಲೆಯೇ ಕಟ್ಟಿದ್ದಾನೆಂದು ಹೇಳುವುದಕ್ಕೆ ಪ್ರಬಲವಾದ ಕಾರಣಗಳುಂಟು.

ಪಂಪ–ರನ್ನ

'ಮಹಾಭಾರತ'ದ ಕಥೆಗೂ 'ಪಂಪಭಾರತ'ದ ಕಥೆಗೂ ಅನೇಕ ವ್ಯತ್ಯಾಸಗಳಿವೆ. ಹಾಗೆ ವ್ಯತ್ಯಾಸವಿರುವ ಕಡೆಯಲ್ಲೆಲ್ಲಾ ರನ್ನನು ಸಾಧಾರಣವಾಗಿ ಪಂಪನ ದಾರಿಯಲ್ಲೇ ಹೋಗಿದ್ದಾನೆ. 'ಗದಾಯುದ್ಧ'ದ ಕಥಾಭಾಗವು ಸ್ವಲ್ಪ; ಅದರಲ್ಲಿ ಮುಕ್ಕಾಲುಪಾಲೆಲ್ಲಾ 'ಮಹಾಭಾರತ'ದಲ್ಲಿ ಇಲ್ಲವೆಂದೇ ಹೇಳಬೇಕು. 'ಗದಾಯುದ್ಧ'ದಲ್ಲಿ ಬರುವ ಹೃದಯ ವಿದ್ರಾವಕವಾದ ಪ್ರಲಾಪಗಳಿಗೂ ಸ್ವಾರಸ್ಯವುಳ್ಳ ಸನ್ನಿವೇಶಗಳಿಗೂ ಸೂಚನೆಯನ್ನು ನಾವು 'ಪಂಪ ಭಾರತ'ದ ಹದಿಮೂರನೆಯ ಆಶ್ವಾಸದಲ್ಲಿಯೇ ಕಾಣುವುದು.

. . .

ಗದಾಯುದ್ಧದಲ್ಲಿ ರಸವತ್ತಾದ ಅನೇಕ ಭಾಗಗಳಿಗೆ ಪಂಪನು

---

* 'ಗದಾಯುದ್ಧ'ದ ಕೊನೆಯ ಆಶ್ವಾಸಕ್ಕೂ 'ಪಂಪ ಭಾರತ'ದ ಹದಿನಾಲ್ಕಯ ಆಶ್ವಾಸಕ್ಕೂ ಸಂಬಂಧವಿದೆ; ಆದರೆ ಇದು ಮುಖ್ಯವಲ್ಲ.

ಕಾರಣವಾಗಿರುವಂತೆ ಈ ಭಾಗಕ್ಕೂ ಕಾರಣವಾಗಿದ್ದರೂ ಇಲ್ಲಿ ರನ್ನನ ಕೈವಾಡವೇ ಹೆಚ್ಚಾಗಿದೆ. ಅಲ್ಲದೆ, ಮತ್ತೊಬ್ಬರು ಸಂಪಾದಿಸಿಟ್ಟ ವಸ್ತುವಿನ ಬೆಲೆಯನ್ನು ಗ್ರಹಿಸಿ ಅದನ್ನು ಸದುಪಯೋಗಪಡಿಸಿ ಅಭಿವೃದ್ಧಿಪಡಿಸಿಕೊಳ್ಳುವುದಕ್ಕೂ ಒಂದು ಸಾಮರ್ಥ್ಯ ಬೇಕು ; ಹಾಗಲ್ಲದಿದ್ದರೆ, ಪಂಪನನ್ನು ಓದಿದ ಕವಿಗಳೆಲ್ಲರೂ ರನ್ನರಾಗಬೇಕಾಗಿತ್ತು. . . .

ರನ್ನನು ಪಂಪನನ್ನು ಹಿಂಬಾಲಿಸಿರುವನೆಂದು ಎಲ್ಲರೂ ಒಪ್ಪಿಕೊಳ್ಳಲೇ ಬೇಕು. ಒಪ್ಪಿಕೊಂಡರೆ ಏನು ಹಾನಿ? 'ಪಂಪ ಭಾರತ'ದಿಂದ ರನ್ನನು ತೆಗೆದುಕೊಂಡಿರಬಹುದಾದ ಅಂಶವು ಎಷ್ಟೆಂದು ಲೆಕ್ಕ ಮಾಡಿದರೆ ಸುಮಾರು ಹದಿನೈದು ಪದ್ಯಗಳಿಗೂ ಐದು ವಚನ ಖಂಡಗಳಿಗೂ ಹೆಚ್ಚಾಗಲಾರದು. ವಚನಗಳನ್ನು ಬಿಟ್ಟು ಎಣಿಸಿದರೇ ಸುಮಾರು ೫೭೫ ಪದ್ಯಗಳಿರುವ 'ಗದಾಯುದ್ಧ'ದಲ್ಲಿ ಎಲ್ಲಿಯೋ ಇಪ್ಪತ್ತು ಇಪ್ಪತ್ತೈದು ಗದ್ಯ ಪದ್ಯಗಳಿಗೆ ಆಕರವು ಹೆರರ ಗ್ರಂಥಗಳಲ್ಲಿ ಸಿಕ್ಕಿದ ಮಾತ್ರಕ್ಕೆ 'ಗದಾಯುದ್ಧ'ವೆಲ್ಲಕ್ಕೂ ಅಪವಾದವು ತಟ್ಟಿದಂತಾಗುವುದೆ? ಅದರ ಕವಿತೆಯ ಸವಿಯೆಲ್ಲ ಹುಳಿಯಾಗಿ ಹೋಗುವುದೆ? ಈ ಇಪ್ಪತ್ತು ಇಪ್ಪತ್ತೈದು ಪದ್ಯ ವಚನಗಳ ಮೇಲೆಯೇ ರನ್ನನ ಕೀರ್ತಿ ಸ್ತಂಭವು ನಿಂತಿದೆಯೆ? ಇದೆಲ್ಲವನ್ನೂ ತೆಗೆದು ಹಾಕಿದರೂ 'ಗದಾಯುದ್ಧವು' ಮೊದಲಿನಷ್ಟೇ ಚೆನ್ನಾಗಿ ಬೆಳಗುವುದಿಲ್ಲವೆ?

ಈ ದೋಷಾರೋಪವು 'ಗದಾಯುದ್ಧ'ವೊಂದಕ್ಕೇ ತಗಲುವುದಿಲ್ಲ. ರನ್ನನನ್ನು ಕೃತಿಚೋರನೆಂದು ಕರೆದರೆ ಪಂಪನಿಗೂ ಅದೇ ಹೆಸರಿಡಬೇಕಾಗುತ್ತದೆ.

—( ರನ್ನಕವಿಪ್ರಶಸ್ತಿ, ಪುಟಗಳು ೮೪, ೨೩೩, ೯೧–೯೨ )

ಗದಾಯುದ್ಧ ಕಾವ್ಯದಲ್ಲಿ ದುರ್ಯೋಧನನ ಚರಿತ್ರವು ಎಷ್ಟು ಮಟ್ಟಿಗೆ ಒಡಮೂಡಿದೆಯೋ ಅಷ್ಟು ಮಟ್ಟಿಗೆ ಭೀಮಸೇನ **ಗದಾಯುದ್ಧದ** ಚರಿತ್ರವು ಒಡಮೂಡಿಲ್ಲ. ಭೀಮನು ಯುಕ್ತಾ **ನಾಯಕರು** ಯುಕ್ತ ವಿಚಾರವನ್ನು ಬದಿಗಿರಿಸಿ ಸಾಹಸವನ್ನು ಮಾಡುವ ಆವೇಶದ ಮೂರ್ತಿಯೆಂದು ಮಾತ್ರ ತೋರುವಂತಾಗಿದೆ.

ಭೀಮಸೇನನ ಇತರ ಉದಾತ್ತ ಗುಣಗಳನ್ನು ಚಿತ್ರಿಸುವುದಕ್ಕೆ ಕವಿಗೆ ತಕ್ಕ ಸಂದರ್ಭಗಳೇ ದೊರೆತಿಲ್ಲ. ದುರ್ಯೋಧನನ ಚರಿತ್ರವನ್ನು ಕವಿಯು ಬಲು ಸೊಗಸಾಗಿ ಚಿತ್ರಿಸಿರುವನು. ಉದಾತ್ತ ಮಾನವೋಚಿತವಾದ ಆತನ ಹಲವು ಗುಣಗಳನ್ನು ಕವಿಯು ಮೆಚ್ಚಿ ಹೊಗಳಿರುವನು. ಜಯಲಕ್ಷ್ಮಿಯು ಭೀಮಸೇನನ ಕೊರಳಲ್ಲಿ ಮಾಲೆಯನ್ನು ಹಾಕಿದ್ದರೂ ದುರ್ಯೋಧನನ ಉದಾತ್ತತೆಯನ್ನು ನಮ್ಮ ಕಣ್ಣೆದುರಿಗೆ ತೋರ್ಪಡಿಸಿ ಆತನಿಗೆ ಸೋಲು ಬಾರದಿದ್ದರೆ ಒಳಿತಾಗುತ್ತಿತ್ತೆಂದೂ, ಸೋಲು ಬಂದರೂ ನೆಲದಮೇಲೆ ಹೊರಳಾಡುತ್ತ ವೈರಿಯಿಂದ ಒದೆಯಿಸಿಕೊಂಡು ಪ್ರಾಣಬಿಡುವ ದುರ್ದಶೆಯು ಬರಬಾರದಾಗಿತ್ತೆಂದೂ ಎನಿಸುವಂತೆ ನಮ್ಮ ಸಹಾನುಭೂತಿಯನ್ನು ಕವಿಯು ದುರ್ಯೋಧನನ ಕಡೆಗೆ ಎಳೆದಿರುವನು. ಈ ಕಾವ್ಯದಲ್ಲಿ ಭೀಮಸೇನನು ಕೇವಲ ಧೀರೋದ್ಧತನಾಯಕನೇ ಎಂದು ಮೊದಲಿಂದ ಕೊನೆಯವರೆಗೂ ತೋರುತ್ತಿದೆ. ಆದರೆ ದುರ್ಯೋಧನನು ನಡುನಡುವೆ ಧೀರೋದ್ಧತತೆಯ ಗಡಿಯನ್ನು ದಾಟಿ ಧಿರೋದಾತ್ತನಂತೆ ತೋರುತ್ತಾನೆ. ಧೀರೋದಾತ್ತತೆಯು ಸ್ಪಷ್ಟವಾಗಿ ಒಡಮೂಡದಿದ್ದರೂ ಆತನು ಧೀರೋದಾತ್ತ ಕಲ್ಪನೆಂದೆನಿಸುವಂತೆ ಕವಿಯು ಆತನ ಚರಿತ್ರವನ್ನು ಚಿತ್ರಿಸಿರುವನೆಂಬ ವಿಷಯದಲ್ಲಿ ಸಂಶಯವಿಲ್ಲ.

. . .

ಒಟ್ಟಿನಲ್ಲಿ ಕಾವ್ಯಲಕ್ಷಣದಿಂದ, ಸಂವಿಧಾನರೀತಿಯಿಂದ, ವ್ಯಕ್ತಿಪ್ರಾಧಾನ್ಯದಿಂದ, ರಸಪೋಷಕತ್ವದಿಂದ ಕೌರವನೇ ಮೇಲ್ಮೈಯಾಗಿರುವನು. ಮೇಲಾಗಿ, ಭೀಮಸೇನನು ನಮ್ಮ ಅವಗಾಹನೆಯಲ್ಲಿ ಸ್ವಲ್ಪ ಕಾಲ ಮಾತ್ರವೇ ಇರುವನು. ಪ್ರಸ್ತಾವನಾರೂಪವಾದ ದ್ರೌಪದೀ ಭೀಮಸೇನರ ಸಂವಾದ, ಕೌರವನು ಎಲ್ಲಿಯೂ ಕಾಣದಿರಲು ಧೃತರಾಷ್ಟ್ರ ಗಾಂಧಾರಿಯರ ಬೀಡಿನ ಪ್ರವೇಶ, ಪ್ರತಿಜ್ಞಾನಿರ್ವಹಣೋತ್ಸುಕತೆಯನ್ನು ವ್ಯಕ್ತಗೊಳಿಸುವ ವೀರೋಕ್ತಿಗಳು, ವೈಶಂಪಾಯನ ಸರೋವರ ಸಮ್ಮುಖದಲ್ಲಿ ಕೌರವನ ಮೂದಲೆ,

ಎಲ್ಲವನ್ನೂ ಕೊನೆಗಾಣಿಸುವ ಗದಾಯುದ್ಧ—ಈ ಪ್ರಸಂಗಗಳಲ್ಲಿ ಮಾತ್ರ ಭೀಮನನ್ನು ನಾವು ನೋಡುವೆವು.

ದುರ್ಯೋಧನನಾದರೊ ಮೊದಲಿಂದ ಕೊನೆಯವರೆಗೂ ನಮ್ಮ ಲಕ್ಷ್ಯದಲ್ಲಿ ನಟ್ಟು ವ್ಯಕ್ತಿ ವೈಶಿಷ್ಟ್ಯದಿಂದ ನಮ್ಮ ಆತ್ಮೀಯತೆಯನ್ನು ಸಂಪಾದಿಸಿರುವನು. ಅವನ ಉದಾತ್ತತೆಯನ್ನು ಕಂಡ ನಾವು ಸಿಂಹಾವಲೋಕನ ಕ್ರಮದಿಂದ ನಿರೂಪಿಸಲ್ಪಟ್ಟಿರುವ 'ಮುಳಿಸಿಂ ನಂಜೆಕ್ಕಿ ಕೊಂದ' ಇತ್ಯಾದಿ ದುರ್ನಯಗಳನ್ನು ಮರೆಯುವೆವು. ಕೌರವನು ಮಡಿದಮೇಲೆ ವೇಣೀ ಸಂಹಾರ, ಶೃಂಗಾರ ಪೋಷಕವಾದ ಭೀಮ ಕೃತ ದ್ರೌಪದೀ ಸೌಂದರ್ಯ ವರ್ಣನೆ, ದ್ರೌಪದೀ ಭೀಮಸೇನರ ಪಟ್ಟಾಭಿಷೇಕ, ಈ ಪಾಂಡವರ ಅಭ್ಯುದಯಗಳು ನಡೆಯುವುವು; ಮಾತ್ರ ನಾವು ಈ ಪ್ರಸಂಗಗಳಲ್ಲಿ ಸೇರಲಾರೆವು. ಕೌರವನ ಊರುಭಂಗ, ಮಕುಟಭಂಗಗಳಿಂದ ದುಃಖಗೊಂಡ ನಾವು, ಭೀಮನ ಪಟ್ಟವನ್ನು ಹೇಗೆತಾನೇ ನೋಡಬಲ್ಲೆವು? ತೊಡೆ ಮುರಿದು ಕಿರೀಟವನ್ನೊದೆದ ಭೀಮನು ಕ್ರೋಧವನ್ನು ಕಾರುತ್ತ ಹೆಕ್ಕಳಿಸಿ ಕೌರವನ ಇರವನ್ನು ದ್ರೌಪದಿಗೆ ತೋರಿಸುತ್ತಿರಲು (೮–೪೫) ಸಹನೆಯ ಕಟ್ಟು ಮುರಿದು, ದುಃಖದ ಮೇರೆ ಮೀರಲು, ಬಲದೇವನು ದ್ವಾರವತಿಗೆ ಹೋದಂತೆ ನಾವೂ ಎಲ್ಲಿಯೋ ಹೋಗಿಬಿಡುವೆವು. ಮುಂದೆ ಏನು ನಡೆಯುವುದೆಂದು ತಿಳಿಯಲು ಕುತೂಹಲವು ಕೂಡ ಇರುವುದಿಲ್ಲ.

—(ರನ್ನಕವಿಪ್ರಶಸ್ತಿ; ಪುಟಗಳು ೧೧೬, ೧೩೩–೪)

ಭಾರತದಲ್ಲಿಲ್ಲದ ಕೆಲವು ಘಟನೆಗಳು ರನ್ನನ ಕಾವ್ಯದಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ಮುಖ್ಯವಾದವುಗಳಾವುವೆಂದರೆ:—

**ಗದಾ ಯುದ್ಧವು ರುದ್ರನಾಟಕ**

ದುರ್ಯೋಧನನು ತನ್ನ ಅಪಜಯದಿಂದ ಖಿನ್ನ ಮನಸ್ಕನಾಗಿ ದ್ರೋಣನನ್ನೂ, ಅಶ್ವತ್ಥಾಮನನ್ನೂ ಹಳಿಯುವುದು; ಸಂಜಯನು ಅವರ ಕರ್ತವ್ಯಪರಾಯಣತೆಯನ್ನು ಕೊಂಡಾಡಿ ಭೀಮಾರ್ಜುನರ ಪರಾಕ್ರಮವನ್ನು ಹೊಗಳುವುದು; ದುರ್ಯೋಧನನು ಕೋಪೋದ್ದೀಪಿತನಾಗಿ ಕೃಷ್ಣ

ನನ್ನೂ ಭೀಮಾರ್ಜುನರನ್ನೂ ನಿಂದಿಸುವುದು ; ದುರ್ಯೋಧನನಿಗೆ ಸಮಾಧಾನ ಹೇಳಿ ಸಂತೈಸಲು, ಅವನ ವೃದ್ಧ ಮಾತಾಪಿತೃಗಳು ರಣ ಭೂಮಿಗೆ ಬರುವುದು ; ಪಾಂಡವರೊಡನೆ ಸಂಧಿಮಾಡಿಕೊಳ್ಳುವಂತೆ ಅವರು ಅವನಿಗೆ ಬೋಧಿಸುವುದು ; ಅವನು ಅದಕ್ಕೆ ಸಮ್ಮತಿಸದೆ ಇರಲು ಭೀಷ್ಮರ ಆಲೋಚನೆಯನ್ನಾದರೂ ಕೇಳಿ, ಮುಂದಣ ಕಾರ್ಯವನ್ನು ನಡೆಸೆಂದು ಅವರು ಉಪದೇಶಿಸುವುದು ; ದುರ್ಯೋಧನನು ಅದಕ್ಕೆ ಸಮ್ಮತಿಸಿ ಭೀಷ್ಮರೆಡೆಗೆ ಹೊರಡುವುದು ; ದ್ರೋಣ, ಅಭಿಮನ್ಯು, ಲಕ್ಷ್ಮಣ, ದುಶ್ಶಾಸನ, ಕರ್ಣ ಇವರ ಮೃತದೇಹಗಳನ್ನು ನೋಡಿ, ಅವನು ಪ್ರಲಾಪಿಸುವುದು ; ಸಂಧಿಮಾಡಿಕೊಳ್ಳುವಂತೆ ಭೀಷ್ಮರು ಉಪದೇಶಿಸಿದರೂ ಅವನು ಒಪ್ಪದೆ ಹೋಗುವುದು ; ಕೊನೆಗೆ ಬಲರಾಮಾದಿಗಳು ಬರುವವರೆಗಾದರೂ ಅವನು ವೈಶಂಪಾಯನ ಸರೋವರದಲ್ಲಿ ಅಡಗಿಕೊಂಡಿರಬೇಕೆಂದು ಅವರು ಬೋಧಿಸಿ ಜಲಸ್ತಂಭ ಮಂತ್ರವನ್ನು ಉಪದೇಶಿಸುವುದು ; ಅಶ್ವತ್ಥಾಮನು ಲಕ್ಷ್ಮಿಯನ್ನು ನಿಂದಿಸುವುದು ; ಕೊನೆಗೆ ಭೀಮನಿಗೆ ಪಟ್ಟಾಭಿಷೇಕವಾಗುವುದು—ಇವುಗಳು ಭಾರತದಲ್ಲಿಲ್ಲದ ಘಟನೆಗಳು.

ರನ್ನನು ಇವುಗಳನ್ನು ಮನೋಜ್ಞವಾಗಿ ಬಣ್ಣಿಸಿದ್ದಾನೆ. ಈ ಬದಲಾವಣೆಗಳ ಪರಿಣಾಮವೆಂಥದು ? ಗದಾಯುದ್ಧದ ದುರ್ಯೋಧನನು ಷೇಕ್ಸ್‌ಪಿಯರ್ ಮಹಾಕವಿಯ ವಿಷಾದಾಂತ ನಾಟಕಗಳ ನಾಯಕನನ್ನು ಸ್ವಲ್ಪ ಮಟ್ಟಿಗೆ ಹೋಲುವಂತೆ ಮಾಡುವ ಉದ್ದೇಶದಿಂದ ಕಥೆಯ ಸಂವಿಧಾನವು ನಾಟಕ ಲೇಖಕರಲ್ಲಿ ಅಗ್ಗಳೆಯನಾದ ಷೇಕ್ಸ್‌ಪಿಯರ್ ಮಹಾಕವಿಯು ಬರೆದಿರುವ ವಿಷಾದಾಂತ ನಾಟಕಗಳ ಸಂವಿಧಾನವನ್ನು ಹೋಲುವಂತೆ ಮಾಡಿರುವುದೇ ಆ ಬದಲಾವಣೆಗಳ ಫಲ.

. . .

"ಗದಾಯುದ್ಧ"ವು ಚಂಪೂ ಕಾವ್ಯವಾದರೂ ಅದೊಂದು ಮಹಾ ದುಃಖಾಂತ ನಾಟಕ. ಅದರ ಕೊನೆಯ ಅಂಕದ ಕೊನೆಯ ದೃಶ್ಯವೇ ಕೌರವನ ಮಹಿಮೆ ಮಯವಾದ ಮರಣ.

ಕವಿಕುಲ ಶಿರೋಮಣಿಯು ನಮ್ಮನ್ನು ಕಾಲದೇಶಾತೀತರನ್ನಾಗಿ ಮಾಡಿ ಕಲ್ಪನಾ ರಾಜ್ಯದ ಸ್ವಪ್ನಮಾರ್ಗದಿಂದ ವೈಶಂಪಾಯನ ಸರೋವರದ ತೀರದೆಡೆಗೆ ತೇಲಿಸಿಕೊಂಡು ಹೋಗಿ ನಿಲ್ಲಿಸುವನು. ಕಣ್ದೆರೆದು ನೋಡಿದರೆ ಶತಮಾನಗಳ ಹಿಂದಿನ ನೀಲ ಗಗನ! ಶತಮಾನಗಳ ಹಿಂದಿನ ಪವಿತ್ರತಮ ರಮಣೀಯ ವಾತಾವರಣ! ವನಾವೃತವಾದ ಬಂಧುರ ವೈಶಂಪಾಯನ ಕಮಲಾಕರ! ಪಶ್ಚಿಮ ಗಗನಾಂಗಣದಲ್ಲಿ ಮುಳುಗುವ ರವಿಯು ವ್ಯಸನ ಸೂಚಕವಾದರೂ ಅತಿ ಪ್ರಕಾಶವಾದ ಸಂಜೆಗೆಂಪನ್ನು ಬೀರುತ್ತಿರುವನು. ದ್ವಾಪರ ಯುಗದ ಶಾಂತಿ ಯುಕ್ತವಾದ ಸಂಧ್ಯಾಕಾಲ! ಸಾಮಾನ್ಯವಾಗಿ ಸಾಯಂಕಾಲವು ಮೌನ ವ್ರತಾಚಾರಿಯಾದರೂ ಇಂದು ವೈಶಂಪಾಯನ ಕೊಳದ ತೀರದಲ್ಲಿ ಎಂದೂ ಎಲ್ಲೆಲ್ಲಿಯೂ ಇರದ ಅತಿಶಯ ನೀರವತೆ. ಮಸಣ ಮೌನವೆಂದರೂ ಎನ್ನಬಹುದು. ಇದೇನು ಕೊಳದ ನೀರು ಬಗ್ಗಡವಾಗಿದೆ! ಪ್ರತಿ ದಿನವೂ ಸರಸ್ಸಿನಲ್ಲಿ ಕಲಕಲ ರವವನ್ನುಂಟುಮಾಡುತ್ತಿದ್ದ ಜಲಪಕ್ಷಿಗಳು ಒಂದಾದರೂ ಕಾಣುವುದಿಲ್ಲ; ಒಂದರ ಕೊರಲ ದನಿಯಾದರೂ ಕೇಳಿಬರುವುದಿಲ್ಲ. ಎಲ್ಲೆಲ್ಲಿಯೂ ಗಭೀರ ನಿಃಶಬ್ದತೆ! ಇದೇನು ಸರಸ್ತಟದ ಕೋಮಲವಾದ ಗಿಡಬಳ್ಳಿಗಳು ಮುರಿದುಬಿದ್ದಿವೆ! ಕಾಡುಕೋಣಗಳ ಹೋರಾಟವೆನ್ನಲಾಗುವುದಿಲ್ಲ; ಏಕೆಂದರೆ ಗೊರಸಿನ ಗುರುತಿಲ್ಲ. ತೀರದ ಹಸುರಿನ ಹಾಸಿಗೆಯು ಯಾವುದೋ ಘಾತದಿಂದ ಬಾಡಿ ಸೊರಗಿದಂತಿದೆ. ನೋಟಕನು ಉತ್ತರಕ್ಷಣದಲ್ಲಿಯೇ ಮನುಷ್ಯರ ಪಾದಗಳ ಗುರುತನ್ನೂ, ಹಸುರಿಗೆ ಅರುಣತೆಯನ್ನು ಕೊಡುವ ಶೋಣಿತವನ್ನೂ ಕಂಡು ಚಮಕಿತನಾಗುವನು. ಇದಾವನು! ತೀರದ ಒಂದು ಕಡೆಯಲ್ಲಿ ಊರು ಭಂಗ, ಕಿರೀಟ ಭಂಗಿತನಾಗಿ ಬಿದ್ದು ಕಡೆಯುಸಿರೆಳೆಯುತ್ತಿರುವನು. ಅವನೇ ಕೌರವ ಮಹಾನುಭಾವನು; ಅವನೇ ಕುರುಕುಲ ಚಕ್ರವರ್ತಿಯು! ಕವಿಪುಂಗವ ಆರ್ಯ ರನ್ನನು ನಮ್ಮನ್ನು ಸ್ವಲ್ಪ ಮುಂಚಿತವಾಗಿಯೇ ಅಲ್ಲಿಗೆ ಕೊಂಡೊಯ್ದಿದ್ದರೆ ಕುರುನೃಪಾಲನ ಈ ದುರ್ಗತಿಯು ನಮಗೆ ವಿಸ್ಮಯಕಾರಿಯಾಗುತ್ತಿರಲೇ ಇಲ್ಲ. . . . .

ದೈವ ಸಂಕಲ್ಪವನ್ನು ಮೀರುವರಾರು ? ವೈಶಂಪಾಯನ ಸರೋವರದಲ್ಲಿ ಕುರುಕುಲ ಸ್ವಾಮಿಯು ಅಡಗಿರುವುದು ಪತ್ತೆಯಾಗಿ ಹೋಯಿತು. ಯಾವ ಭೀಮನನ್ನು ಹುಡುಕಿಕೊಂಡು ತಾನೇ ಮೊದಲು ಹೊರಟಿದ್ದನೋ ಆ ಭೀಮನು ಹೊರಗೆ ನಿಂತು ಜರೆಯುತ್ತಿದ್ದರೆ ಗುರು ವಚನ ನಿರ್ಬಂಧದಿಂದ ಒಳಗೆ ಸಿಕ್ಕಿ ಕ್ರೋಧಾವೇಶ ಪರಿಪೂರ್ಣನಾಗಿ " ನೀರೊಳಗಿರ್ದುಂ ಬೆಮರ್ತನುರಗಪತಾಕಂ ". ನೈರಣೆಯ ಮೇರೆಯು ಮುಟ್ಟಿದ್ದಾಯಿತು. ಅಭಿಮಾನಧನನಾದ ದುರ್ಯೋಧನನು ಒರಟು ಭೀಮನ ಮೂದಲಿಕೆಯನ್ನು ಸೈರಿಸಿಕೊಂಡು ಒಳಗಿರುವುದುಂಟೆ ? ಕ್ಷಾತ್ರತೇಜಸ್ಸಿನ ಕಾಂತಿಮೂರ್ತಿಯು ರಣಹೇಡಿಯಂತೆ ಸಲಿಲಾಶ್ರಯದಲ್ಲಿ ನಿಲ್ಲುವುದುಂಟೆ? ಗುರು ವಚನ ಪಾಲನಾರ್ಥವಾಗಿ ಆಗ ಸರೋವರವನ್ನು ಪ್ರವೇಶಿಸಿದ್ದಾಯಿತು. ಕ್ಷಾತ್ರ ಧರ್ಮಪಾಲನಾರ್ಥವಾಗಿ ಈಗ ಸರೋವರವನ್ನು ಬಿಟ್ಟು ಬಂದಾಯಿತು. ಪಂಪ ಮಹಾಕವಿಯು ಈ ಸಂದರ್ಭದಲ್ಲಿ ಹೇಳಿರುವಂತೆ "ಕರಿಕಳಭ ಗರ್ಜ್ಜನೆಗೇಳ್ವ ಮೃಗರಾಜನಂತೆ ರಾಜರಾಜಂ ಸೈರಿಸದೆ ಚಿತ್ರಸ್ಥಲನೆಯಾಗೆ ಜಳಸ್ತಂಭಮಂತ್ರಮೆಲ್ಲಂ ಮಾಯಾಮಂತ್ರಮಾಗೆ" ಗದಾ ದಂಡವನ್ನು ಭುಜಾ ದಂಡದಲ್ಲಿ ಸೇರಿಸಿಕೊಂಡು ಆ "ಲಜ್ಜಾಕರ"ವನ್ನು ಬಿಟ್ಟು ಹೊರಕ್ಕೆ ಬಂದನು. ಗದಾಯುದ್ಧವು ಅನಿವಾರ್ಯವೇ ಆಯಿತು. ದೈವ ಸಂಕಲ್ಪವು ಈಡೇರಿತು. ಇಲ್ಲಿನ ಸನ್ನಿವೇಶವೆಲ್ಲ ದುರಂತಚ್ಛಾಯೆಯಿಂದ ಕೃಷ್ಣ ವರ್ಣವಾಗಿದೆ. ಈ ಕೃಷ್ಣವರ್ಣದ ಛಾಯೆಯಲ್ಲಿ ದುರ್ಯೋಧನನೊಬ್ಬನು ಶೌರ್ಯ ತೇಜಃಪುಂಜನಾಗಿ ಬೆಳಗುತ್ತಿರುವನು. ಈ ತೇಜಃಪುಂಜವನ್ನು ಸುತ್ತಲಿನ ಗಾಢ ನೀಲಚ್ಛಾಯೆಯು ಪಿಶಾಚಿಯ ಕಿರಲು ನಗುವನ್ನು ಬೀರಿ ನುಂಗುತ್ತಿದೆ. ಧರ್ಮದೇವತೆಯು ಅಧರ್ಮದ ಕಪ್ಪು ಮುಸುಕನ್ನು ಹಾಕಿಕೊಂಡು ಅಧರ್ಮ ದೇವತೆಯ ಪಕ್ಕದಲ್ಲಿ ಆ ಗುಂಪಿನಲ್ಲೇ ಸೇರಿದ್ದಾಳೆ. ರಾಜ್ಯ ಲಕ್ಷ್ಮಿಯು ದುರ್ಯೋಧನನ ಅಂತಃಪುರದ ಹೊರಬಾಗಿಲಿನ ಹೊಸ್ತಿಲಿನ ಮೇಲೆ ನಿಂತು ಚಂಚಲ ದೃಷ್ಟಿಯಿಂದ

ಈ ರಣಭೂಮಿಯನ್ನು ನೋಡುತ್ತಿದ್ದಾಳೆ. ಈ ಪರಿಸರಣದಲ್ಲಿ ಸ್ವಲ್ಪವೂ ಅಚ್ಚಳಿಯದೆ ಪರಮೇಶ್ವರನ ಪಂಚ ಮುಖಗಳಂತೆ ನಿಂತಿರುವ ಪಂಚಪಾಂಡವರು; ಎದುರಿನಲ್ಲಿ ಅನುಜ ಶತವನ್ನು ಕಳೆದು ಕೊಂಡು ರೌದ್ರಾವೇಶದಿಂದ ತುಂಬಿ "ಭೀಮಂ ತೊಡರ್ದನಿಬರೊಳಂ ಬರ್ಕೆ ಮೇಣ್ ಬನ್ನವಿರಾವೆಂ" ಎಂದು ಎಲ್ಲರನ್ನೂ ಯುದ್ಧಕ್ಕೆ ಕರೆಯುತ್ತಿರುವ ಸಾಹಸ ಮಲ್ಲ ಏಕಾಂಗವೀರ ದುರ್ಯೋಧನನು; ಆ ಕಾಲಕ್ಕೆ ಜಂಗಮ ಹಿಮಾಚಲವೆ ಬರ್ಪಂತೆ ಬಂದ ಬಲರಾಮನು; ನಿರೀಕ್ಷಿತನಾದ ಬಲರಾಮನು ಬಂದನು, ಈಗಲಾದರೂ ದೈವಬಲಕ್ಕೆ ತಿರಸ್ಕಾರವಾದೀತೆ ಎಂಬುವ ನಮ್ಮ ನಿರೀಕ್ಷೆ. "ತಮ್ಮನಿಬರೊಂದಾಗಿ ಗೊಂದಣಿಸಿ ನಿಂದ ಪಾಂಡು ನಂದನರುಮಂ ಏಕಾಕಿಗನಾಗಿ ಸಾವಿಯ ದೇಸಿಗನಾಗಿ ನಿಂದ ಕುರುಕುಲ ಸ್ವಾಮಿಯುಮಂ" ಎಂಬ ಪ್ರತಿರೋಧದ ಚಿತ್ರ; ದುರ್ಯೋಧನನ ನಮಸ್ಕಾರ, ಬಲರಾಮನ ಆಶೀರ್ವಾದ, ಕಡೆಗೆ—

> "............ಏಕೆ ಮುನಿವಿರ್ ನಿರ್ದೋಷಿಗಳ್ ಪಾಂಡು ನಂ"
> ದನರಾನೊಲ್ಲಿನೆ ಮುನ್ನಮೆಂತುಮಿವರೊಳ್ ಸಂಧಾನಮಂ ಪೇೞ್ದಿನೆಂ
> ದೆನೆ ಸತ್ತರ್ ತನುಜಾನುಜರ್ ಪಲಬರುಂ ತದ್ದುಃಖಮಂ ಸೈರಿಸ
> ಲ್ಕೆನಸುಂ ಬಂದವುದೆಂದೊಡಿರ್ಕೆ ಪಗೆವರ್ ಸನ್ನದ್ಧನಾಗಿರ್ದಪೆಂ ॥"

ಎಂದು ಯುದ್ಧ ಸನ್ನದ್ಧ ಕಾರಣವನ್ನು ದೈವವು ಹೇಳುವಂತೆಯೇ ಸತ್ಯದಿಂದ ನುಡಿದು ಸಾವಿಗೆ ಅಂಜದೆ ರೋಷ ದುಃಖಗಳಿಂದ ತುಂಬಿ ಶೌರ್ಯಮೂರ್ತಿಯಾಗಿ ದುರ್ಯೋಧನನು ನಿಂತಿರುವುದು—ಇವೆಲ್ಲವೂ ಒಂದಕ್ಕೊಂದು ಸಹಾಯಕವಾಗಿ ದುರಂತ ಪರಿಣಾಮದ ಪರಾಕಾಷ್ಠೆಯನ್ನು ತೋರಿಸುತ್ತವೆ. ಮನುಷ್ಯನು ಇಲ್ಲಿಗೆ ನಿಸ್ಸಹಾಯನು. ಯಾರಿದ್ದರೂ ಏನೂ ಮಾಡುವ ಹಾಗಿಲ್ಲ.

—( ರನ್ನಕವಿಪ್ರಶಸ್ತಿ, ಪುಟಗಳು, ೧೪೦, ೧೭೧–೨, ೧೮೯–೯೦ )

ರನ್ನನ ಶೈಲಿಯು ವೀರ್ಯವತ್ತಾದ ಶೈಲಿ. ಅಷ್ಟೇ ಬಲವನ್ನು ಇನ್ನೊಂದು ಶೈಲಿಯಲ್ಲಿ ನೋಡಲಿಚ್ಛೈಸಿದರೆ ನಾವು ಪರ ಸಾಹಿತ್ಯಕ್ಕೇ

**ಶೈಲಿ**

ಪ್ರಯೋಗಮಾಡಬೇಕು. ನಮ್ಮ ಕವಿಗಳು ಒಬ್ಬೊಬ್ಬರಲ್ಲಿ ಶಬ್ದಾಡಂಬರವು ಯಥೇಚ್ಛವಾಗಿ ದೊರೆಯುತ್ತದೆ. ಆದರೆ ಶಬ್ದಾಡಂಬರವು ಶಕ್ತಿಯಲ್ಲ. ಶಕ್ತಿಗೆ ಕಾರಣಭೂತವಾದ ವಾಗ್ವೈಭವವು ರನ್ನನೊಬ್ಬನಿಗೇ ಮೀಸಲಾಗಿದೆ. ಇತರ ಕವಿಗಳು ಇಂಪು, ಮಾಧುರ್ಯ, ಸೌಕುಮಾರ್ಯ, ಲಘುಧಾಟಿ ಮೊದಲಾದ ಗುಣಗಳನ್ನು ಶ್ಲಾಘನೀಯವಾಗಿ ಪ್ರದರ್ಶಿಸಿರುವರು. ಆ ಗುಣಗಳು ರನ್ನನಿಗೆ ಅವಶ್ಯಕವಿಲ್ಲ. ದುರ್ಯೋಧನ ದರ್ಪ, ದುರ್ಯೋಧನ ಛಲ, ದುರ್ಯೋಧನ ಪ್ರಲಾಪ; ಹಾಗೂ ಭೀಮಕೋಪ, ಭೀಮ ಪ್ರತಿಜ್ಞೆ, ಭೀಮಸೇನಾಡಂಬರ—ಇವಕ್ಕೆ ಸಮುಚ್ಚಯವಾದ ಶೈಲಿಗೆ ಲಾಲಿತ್ಯದ ಹಂಬಲೇಕೆ? "ಸ್ಥಿರಬದ್ಧ ಮತ್ಸರರ್ ಭೀ । ಕರ ಬದ್ಧ ಭ್ರುಕುಟಿ ಘಟಿತರದ್ಭುತರಟ್ಟಾ॥ ಸುರರಧಿಕಕೋಪ ಪಾಟಳ। ಪರುಷೇಕ್ಷಣ"ರೇ ಪಾತ್ರಗಳು! "ಗದೆ ಗದೆಯಂ ಘಟ್ಟಿಸೆ ಪುಟ್ಟಿದ ಕೆಂಡದ ಕಿಡಿ"ಗಳೇ ಪದಗಳು! "ಕೈ ನಡುಗದೆ ಗದೆಯಂ ತಿರುಪುವ ಬೆಡಂಗೇ" ಪದಸರಣಿ! "ದಪ್ಪರಿದಟ್ಟುಂ ಪೊಟ್ಟನೆ । ಧೊಪ್ಪಧೊಗಪ್ಪೆನೆದಿಧಿಲ್ಬುಧಿಲ್ಲೆನೆ ಗದೆಗಳ್ ॥ ಸೊಪ್ಪು ಸೊವಡಪ್ಪಿನಂ ಸೂ । ಟ್ಟಿಪ್ಪದೆ," "ಮುಂಡುಪಂ ಬೆನ್ನಂ ಕೊರಲಂ ನಡುನೆತ್ತಿಯನೆತ್ತಿ ಪೊಯ್ದುರೊರ್ವರ ನೊರ್ವರ್" ಎನ್ನುವುದೇ ಪದಧಾಟಿ! ಈ ಶೈಲಿಯ ಸಾಮರ್ಥ್ಯವನ್ನು ಬೇರೆಯ ಮಾತುಗಳಿಂದ ವರ್ಣಿಸಲಸಾಧ್ಯ.

. . .

ರನ್ನನ ಶೈಲಿಯು ರೂಪಕ ಕಾವ್ಯಕ್ಕೆ ಅನುಗುಣವಾದ ಶೈಲಿ. (ಕ) ಅದರಲ್ಲಿ ಪದಬಾಹುಳ್ಯಕ್ಕೆ ಅವಕಾಶವೇ ಇಲ್ಲ. ಅಭಿಪ್ರಾಯಗಳಿಗೆ ಸಂಗ್ರಹವಾದ ಬಿಗಿಯಾದ ಸರಿಯಾದ ವಾಣಿಯು ದೊರಕಿದೆ. (ಖ) ಆದ್ಯಂತವಾಗಿ ಭಾಷೆಯು ಸಂಭಾಷಣಾರೂಪದಲ್ಲಿಯೇ ಇದೆ. ಭೀಮ–ದ್ರೌಪದಿ, ಕೌರವ–ಸಂಜಯ, ಕೌರವ–ಮೃತವೀರರು, ಕೌರವ–ಭೀಷ್ಮ, ಭೀಮ–ಕೌರವ, ಕೌರವ–ಅಶ್ವತ್ಥಾಮ—ಈ ಹೆಸರುಗಳಿಂದ ಕಾವ್ಯದ ಸನ್ನಿವೇಶಗಳನ್ನು ಸೂಚಿಸಬಹುದು. "ಎಂದನಾ

ಭೂಪ,'' ''ಅರಸಿದಂ ಪವನಸುತಂ,'' ಇತ್ಯಾದಿ ವರ್ಣನೆಗೆ ಸಹಜವಾದ ಪ್ರಯೋಗಗಳು ರನ್ನನಲ್ಲಿ ಅತಿಕೊಂಚವಾದುದರಿಂದ ಅವನ ಪದ್ಯಗಳನ್ನು ವ್ಯತ್ಯಾಸವಿಲ್ಲದೆಯೇ ನಾಟಕಕ್ಕೆ ಹಾಕಬಹುದು. ಆಗಲೇ ಹಾಗೆ ಹಾಕಿ ಪರೀಕ್ಷಿಸಿದ್ದಾಗಿದೆಯೆಂಬುದು ಕನ್ನಡ ನಾಡಿಗೆ ವೇದ್ಯವಾದ ಸಂಗತಿ. (ಗ) ಪಾತ್ರಗಳ ಗುಣಾವಗುಣ ಧೈರ್ಯ ದರ್ಪ ಶೋಕ ಚಿತ್ತಕ್ಷೋಭೆಗಳು ಅವರಾಡುವ ಮಾತು ಮಾಡುವ ಕೆಲಸಗಳಿಂದ ವ್ಯಕ್ತವಾಗುತ್ತವೆಯೇ ಹೊರತು ಕವಿಯ ವರ್ಣನೆಯಿಂದಲ್ಲ. ಇದು ರೂಪಕದ ಪ್ರಾಮುಖ್ಯ ಲಕ್ಷಣ. (ಘ) ನಾಟಕಕ್ಕೆ ಕ್ರಿಯೆಯೇ ಜೀವ. ''ಗದಾಯುದ್ಧ''ವು ಹೆಸರಿಗೆ ತಕ್ಕಂತೆ ಕ್ರಿಯೆಯಿಂದಲೇ ಪರಿಪೂರ್ಣವಾಗಿದೆ. (ಚ) ರನ್ನನು ಪ್ರತಿಯೊಂದನ್ನೂ ಎಂದರೆ ಗೂಢ ವಿಷಯವನ್ನೂ ಮೂರ್ತಿವತ್ತಾಗಿ ಮಾಡುತ್ತಾನೆ. ಅವ್ಯಕ್ತ ವಿಷಯವೆಂದರೆ ಅವನಿಗೆ ಸರಿಬೀಳದು. ಇದೂ ರೂಪಕದಲ್ಲಿ ವಿಶೇಷವಾಗಿ ಕಾಣಲಾಗುವ ಧರ್ಮ. (ಛ) ಅಲ್ಲದೆ ಕಾವ್ಯಗಳು ಒಂದಕ್ಕೊಂದು ಕಿಚ್ಚುಗೊಟ್ಟು ದಳ್ಳುರಿಯನ್ನೇಳಿಸುವಂತೆ ಕವಿಯ ಪದಗಳು ರಾಗೋದ್ರೇಕದಿಂದ ಒಂದನ್ನೊಂದು ತಗಲಿ ರಸಪುಷ್ಟಿಯನ್ನಧಿಕಮಾಡುತ್ತವೆ. ಪದಗಳ ಈ ವಿಧದ ಸಂಯೋಜನವು ರೂಪಕಕ್ಕೆ ಸರಿಯಾದುದು.

—( **ರನ್ನಕವಿಪ್ರಶಸ್ತಿ; ಪುಟಗಳು ೨೪೦–೪೧ ; ೨೫೦–೫೧** )

---

ಕವಿಮಾರ್ಗದೊಳೊಳ್ವಾಣಿಪ
ಠವಣಿಪ ಕವ್ಮ್ಯಸುವೆಡೆಯೊಳೊಳ್ವಾಣಿಸಲುಂ ।
ಠವಣಿಸಲುಂ ಕವ್ಮ್ಯಸಲು
ವಿುವನಂತಾರ್ ಬಲ್ಲರೆನಿಸಿದಂ ಕವಿರತ್ನಂ ॥

—( **ಅಜಿತಪುರಾಣ, ೧–೮೩** )

ಶ್ರೀಃ

# ಗದಾಯುದ್ಧನಾಟಕಂ

## ೧ನೆಯ ರಂಗಂ

[ ಕೃಷ್ಣಂ, ಭೀಮಂ, ದ್ರೌಪದಿ ]

ಕೃಷ್ಣಂ—ಶ್ರೀರಮಣಿಗೆ ನೆಲೆ ತನ್ನಯ
ಪೇರುರಮಂ ಮಾಳ್ಪೆನೆಂಬ ಬಗೆ ಮಿಗೆ ಸಮರ
ಪ್ರಾರಂಭಕೆ ಪೂಣ್ದಿರ್ಪಂ
ಕೌರವಕುಲವಿಲಯಕೇತು ಸಾಹಸಭೀಮಂ ೧

ಕುರುಭೂಭೃದ್ಬಲಕೂಲತೂಲಪವನಂ ಕೌರವ್ಯಗಂಧೇಭಕೇ
ಸರಿ ದುಶ್ಶಾಸನರಕ್ತರಕ್ತವದನಂ ದುರ್ಯೋಧನೋರುಕ್ಷಮಾ
ಧರವಜ್ರಂ ಕುರುರಾಜರತ್ನಮಕುಟೋತ್ಕೂಟಾಂಘ್ರಿಸಂಘಟ್ಟಸಂ
ಗರನೆಂದೆಂದಭಿವರ್ಣಿಪೆಂ ರಣಯಶಶ್ಶ್ರೀರಾಮನಂ ಭೀಮನಂ ೨

ದ್ರೌಪದಿ—ವರ್ಣಿಸು, ವರ್ಣಿಸು. ವೀರ್ಯಮಿಲ್ಲದ ಕಥೆಯೊಳ್ ವರ್ಣನೆಯುಂ ವೇಡಾ ?

ಕೃಷ್ಣಂ—ಕೇಳ್ದೆಯಾ, ಭೀಮ ! ನೊಂದು ನುಡಿವಳ್ ತಂಗೆ.

ಭೀಮಂ—ಸಹಜಂ.

ಕುರುರಾಜಾನುಜಭೀಕರ
ಕರವಿಲುಳಿತನೀಲಕಬರಿಭರಮಂ ಪಿಡಿದುಂ
ಪರಿಭವಿಸಲ್ ಕೃಷ್ಣೆಗೆ ಮಿಗೆ
ದೊರೆಕೊಳಿಸದೆ ಕೋಪಮಂ ಮನಸ್ತಾಪಮುಮಂ ೩

ವೈರಾಗ್ಯಪರಂ ಧರ್ಮಪುತ್ರಂ—

ಧಾತ್ರಿಯುಮನೀಹುತಾಶನ
ಪುತ್ರಿಯುಮಂ ಬಱಿದೆ ಸೋಲ್ತನಲ್ಲಂ ಜೂದಿಂ
ಕ್ಷತ್ರಿಯತೇಜಮುಮಂ ಯಮ
ಪುತ್ರಂ ರಿಪುಗಂದೆ ಸೋಲ್ತನಾಗಲೆವೇಡಾ ೪

ಅವನ ತಮ್ಮಂದಿರ್ ನಾವು—

ಪರವಶದೊಳಿರ್ದೆವೋ ಮೇಣ್
ಪರಾರ್ಜಿತಪ್ರಾಣರಾದೆವೋ ದ್ರೌಪದಿಯಂ
ಪರಿಭವಿಸುವಲ್ಲಿ ನೋಡು
ತ್ತಿರಲಕ್ಕುಮೆ ಪವನಸೂನುಗಂ ಪಾರ್ಥಂಗಂ ೫

ವಿನಯಮನೆ ಬಗೆದು ವಿಕ್ರಮ
ಮನೆ ಬಗೆಯೆವೆ ನರನುಮಾನುಮೆನಗಂ ಸಂಮೋ
ಹನಮಾದುದಕ್ಕುಮಂತಾ
ಜ್ಞಾನ ಸೂನೃತವಚನಮೆಂಬ ಮಂತ್ರಾಕ್ಷರದಿಂ ೬

ದ್ರೌಪದಿ—ಪ್ರಿಯಮೆನಗೆ ಈ ಪಶ್ಚಾತ್ತಾಪಂ. ಸಾಹಸಭೀಮ, ಸತ್ಯಾಶ್ರಯ,

ದನುಜವಿರೋಧಿ ಮಾಡಿದೊಡಮಾಗದೆ ಸಂಧಿಯದೆನ್ನ ನಿನ್ನ ಸೈ
ಪಿನೊಳವಶಿಷ್ಟನಿರ್ಧನಸುಯೋಧನಮಾಯ್ತು ರಿಸೇನೆ ಸಿಂಧುನಂ
ದನಧೃತರಾಷ್ಟ್ರರಿರ್ದೊರೆಯೆ ನಮ್ಮರಸಂ ಮರಳ್ದಿಂಬುಕ್ಕೈಗುಮೆಂ
ದನುಶಯಮಾದುದಿಂದೆನಗೆ ಸಂಶಯಮಂ ಕಳೆ ಕೌರವಾಂತಕಾ

ಖಳದುಶ್ಶಾಸನವಕ್ಷ
ಸ್ಸ್ಥಳೋಚ್ಚಲತ್ಕೃಷ್ಣರಕ್ತಜಲದಿಂ ಕೋಪಾ

ನಳನಂ ಮನ್ನಿಸಿ ನೀನುಂ
ಗಳಾ! ಗಳಿತಕೋಪನಿರ್ಪ ತೆಱದಿಂದಿರ್ಪೈ ೮
ಕ್ಷಮೆದೋಱಿ ಪಗೆವರೊಳ್ ಸಂ
ಧಿಮಾಡಿ ಯಮಸೂನು ಪೇೞೆ ವನವಾಸವೆ ದಲ್
ನಿಮಗೆ ಶರಣೆನಗಮಂದ
ಗ್ನಿಮುಖದೆ ಪುಟ್ಟಿದುದಱಿಂದೆ ಶರಣಗ್ನಿಮುಖಂ ೯

ಭೀಮಂ—ಸುಯೋಧನಪ್ರಳಯಕಾಲೆ, ಪಾಂಚಾಲಿ!

ಗಳಿಯಿಸುತಿರೆ ಕಬರಿಭರಂ
ಗಳಿಯಿಸುತಿರೆ ನಯನವಾರಿ ನಿನ್ನಾನನದಿಂ
ನಳಿನಾನನೆ ನೀನಿರೆ ಕುರು
ಕುಳಾಂತಕಂ ಗಳಿತಕೋಪನೇ! ಈ ಭೀಮಂ ೧೦

ಕುರುನಂದನರಂ ಕೊಂದೆಂ
ಕುರುಶಾಬಾನುಜನ ನೆತ್ತರಂ ಕುಡಿದೆಂ ಪೂ
ಣ್ದೆರಡಂ ತೀರ್ಚಿದೆನಿರ್ದಪು
ವೆರಡುಮವಂ ತೀರ್ಚಿ ತೀರ್ಚದಿರ್ಪೆನೆ ಪಗೆಯುಂ? ೧೧

ಊರುಗಳನುಡಿವೆನೊದೆವೆಂ
ಕೌರವಪರಿವೃಢನ ಮಕುಟಮಂ ವೇಣೀಸಂ
ಹಾರಂ ಮಾಡುವೆನದಱಿಂ
ಭಾರಮದಿನಿತಲ್ಲದೆನ್ನ ಪರಿಭವಭಾವಂ ೧೨

ಅಱಿನ ಮಗಂ ಪ್ರಾರ್ಥಿಸೆ ಬಾಂ
ದೊಱೆಯ ಮಗಂ ಮಾಡೆ ಸಂಧಿಯಾದಪುದೆನುತುಂ
ಮಱುಗದಿರಣ್ಣನ ಮಾತಂ
ಪೆಱಗಿಕ್ಕುವೆನಜ್ಜನಿರ್ದು ಮಾೞ್ಪೊಡಮೀಯೆಂ ೧೩

ದ್ರೌಪದಿ—

ಇಱಿವಬೆಡಂಗ ದೇವ ಪರಮೇಶ್ವರ ಸಾಹಸಭೀಮ ನಿನ್ನೊಳಾ
ರಿಱಿದು ಬರ್ದುಂಕುವರ್ ನಿಜಭುಜೋಗ್ರಗದಾಪರಿಘಪ್ರಹಾರದಿಂ
ಪಱಿವಱಿಯಾಗಿ ಪೊಣ್ಮು ವೆಣನಾಗಿ ಮರುಳ್ಗುಣಿಸಾಗಿ ಯುದ್ಧದೊಳ್
ಕುಱಿದಱಿಯಾಗಿ ಬಿಳ್ದರಿಬಲಂಗಳೆ ಪೇೞವೆ ನಿನ್ನ ಬೀರಮಂ ೧೪

ಒಡಲೊಡಮೆಯೆಂಬಿವೆರಡುಂ
ಕೆಡಲಿರ್ಪುವು ಕೆಡದ ಕಸವರಂ ಜಸಮುದಱಿಂ
ಕೆಡುವೊಡಲೊಡಮೆಯನೆಂದುಂ
ಕೆಡದೊಡಮೆಗೆ ಮಾಱುಗುಡುವುದಿಱಿವಬೆಡಂಗಾ ೧೫

ಮಣಿ ಕನಕಂ ವಸ್ತುವಿಭೂ
ಷಣಂಗಳಂ ಕೊಟ್ಟು ಪೆಂಡಿರೊಲ್ವರೆ? ಗಂಡರ್
ಗುಣಮನೆ ಮೆಱೆವುದು ಶಸ್ತ್ರ
ವ್ರಣಮಂ ನಿನ್ನಂತೆ ಮೆಱೆವುದಿಱಿವಬೆಡಂಗಾ ೧೬

ಕೃಷ್ಣಂ—ಒಳ್ಳಿತ್ತಾಗಿ ಮೂದಲಿಸಿದೆ; ಇನ್ನೆಲ್ಲಿಯ ಧೃತರಾಷ್ಟ್ರಂ! ಎತ್ತಣ ಗಾಂಗೇಯಂ! ಎಲ್ಲಿಯ ಸಂಧಿಕಾರ್ಯಂ! ದುಶ್ಶಾಸನಾದಿಗಳಪ್ಪ ನೂರ್ವರ್ ಕೌರವರುಮಂ ಅಗುರ್ವಾಗೆ ಕೊಂದಿಕ್ಕಿದಂ; ಇನ್ನೊರ್ವನುೞಿದಂ; ದುರ್ಯೋಧನನಂ ಕೊಲ್ವುದುಂ ಗೆಲ್ವುದುಂ ನಮ್ಮರಸಂಗಾವುದು ಗಹನಂ! ಆಹಾ, ರೌದ್ರಾವತಾರೆ, ದೇವಾಸುರಯುದ್ಧಕ್ಕೆ ಕರಗಂಬೊತ್ತ ಡಾವರಡಾಕಿನಿ!

ಕುರುಕುಲಮಂ ನುಂಗಿದೆ! ಇ
ನ್ನರೆಬರುಮಂ ನುಂಗಲಿರ್ಪೆ ಕುರುಪತಿಯುಮನೀ
ಎರಡನೆಯ ಹಿಡಿಂಬಿಯನೆ
ಮ್ಮರಸಂ ರಕ್ಕಸಿಯನೆಲ್ಲಿ ತಂದನೊ ನಿನ್ನಂ! ೧೭

ಭೀಮಂ—ಎನ್ನಾರಾಧನೆಯ ಶಕ್ತಿ ಇವಳ್ ; ಪ್ರಿಯೆ,

ನೀನಗ್ನಿಪುತ್ರಿಯೈ ಪವ
ಮಾನತನೂಭವನೆನಾನ್ ; ಚಲಂ ಕೂಡಿರೆ ಸಂ
ಧಾನಮರಿನೃಪರೊಳೆಂತನ
ಲಾನಿಲಸಂಯೋಗಮುರಿಪದಿರ್ಕುಮೆ ಪಗೆಯಂ ! ೧೮

ಕುರುಕುಲಜೀವಾಕರ್ಷಣ
ಪರಿಣತಮಿದು ಕಾಳಹಸ್ತಮಲ್ಲದೆ ಪರಮೇ
ಶ್ವರಿ, ಕೇಶಹಸ್ತಮಕ್ಕುಮೆ
ಪರಾಭವಜ್ವಲನಧೂಮಕೃಷ್ಣಂ ಕೃಷ್ಣೇ ೧೯

ಕೃಷ್ಣಂ—ಭೀಮಸೇನ, ನೀನಱಿವೆಯಲ್ತೆ ದುರ್ಯೋಧನಂಗೆ ಮೈತ್ರೇಯರ್ ಕೊಟ್ಟ ಶಾಪಮಂ. ಇಂದಿನ ನೇಸಱಿಂದೊಳಗೆ ವೈರಿಯ ನಿಕ್ಕದೆ ಮೂಣ್ದೆವಪ್ಪೊಡೆ ಇನ್ನೆಂದುಮಸಾಧ್ಯಂ. ನಾಳೆ ಬಲರಾಮನುಂ ಬಂದು ಕೂಡುವಂ ಗಡ !

ಭೀಮಂ—ಕೃಷ್ಣ, ಚಿಂತಿಸದಿರು.

ಸತ್ಯಪ್ರತಿಜ್ಞನೆನೆ ಕುರು
ಪತ್ಯೂರುಕಿರೀಟಭಂಗಮಂ ಪಡೆದು ಜಗ
ತ್ಸ್ತುತ್ಯಕೃತಕೃತ್ಯನೆನಿಸದೆ
ಸತ್ಯಾಶ್ರಯವೆಸರ್ಗೆ ಮುಯ್ಯನಾಂಪನೆ ಭೀಮಂ ? ೨೦

ಬಾ, ಯಜ್ಞಪುತ್ರಿ ! ನಿನ್ನ ಕಾರ್ಯಮಾಯ್ತು.

## ೨ನೆಯ ರಂಗಂ

[ ದುರ್ಯೋಧನಂ, ಸಂಜಯಂ ]

ದುರ್ಯೋಧನಂ—ಸಂಜಯ, ಎನ್ನ ದುಃಖಮಂ ಹೃದಯಮೇ ಬಲ್ಲುದು. ಅಸುಹೃತ್ಸೇನೆಗೆ ಸಾಲ್ವನೊರ್ವನೆ ಗಡಂ ! ರುದ್ರಾವತಾರಂ ಗಡಂ ! ನೊಸಲೊಳ್ ಕಣ್ ಗಡಮೆಂದು ನಚ್ಚಿ ಪೊರೆದೆಂ ತಾನಕ್ಕೆ ತಮ್ಮಮ್ಮನ ಕ್ಕಿಸಲಂಬಂ ತಿರುವಾಯ್ಗೆ ತಂದಱಿವರೇ ! ತಾವಿರ್ವರುಂ ಕಯ್ದುವಂ ಬಿಸುಟರ್ ಜೋಳದಪಾಳಿಯಂ ಬಗೆದುದಿಲ್ಲಾ ದ್ರೌಣಿಯುಂ ದ್ರೋಣನುಂ

ಈಯಲಱಿಯಲ್ ಶರಣ್ಬುಗೆ
ಕಾಯಲ್ ಕ್ಷತ್ರಿಯರೆ ಬಲ್ಲರಲ್ಲದೆ ಬ್ರಹ್ಮರ್
ಭೋಯೆನಲುಂ ಬಲ್ಲರ್ ಕೊಲೆ
ಧೋಯೆನಲುಂ ಬಲ್ಲರಱಿಯಲವರೆತ್ತಱಿವರ್ ! ೨೨

ಕರವಾಳಂ ಮಸೆವಂದದೆ
ಮರವಾಳಂ ಮಸೆಯೆ ಕೂರಿತಕ್ಕುಮೆ ? ಕಲಿಯಂ
ಪೊರೆದೊಡೆ ಕೂರ್ಪಂ ತೋರ್ಪಂ
ತಿರೆ ತೋರ್ಕುಮೆ ಪಂದೆ ಪತಿಗೆ ಸಂಗರದೆಡೆಯೊಳ್ ? ೨೩

ಸಂಜಯಂ—(ಆತ್ಮಗತಂ) ಇನ್ನುಂ ಗುರುದೂಷಣಂ ; ಮತ್ತೆಂತು ?

ಕಾರ್ಯಸಖಂ ಶಕುನಿ ಗಡಾ !
ಶೌರ್ಯಸಖಂ ಸೂತಜಂ ಗಡಾ ! ಭೀಷ್ಮಶರಾ
ಚಾರ್ಯರ ನುಡಿ ತಪ್ಪು ಗಡ ! ಆ
ಕಾರ್ಯಂಗಹಿಕೇತನಂಗೆ ವಿಧಿವಿಳಸನದಿಂ ೨೪

(ಪ್ರಕಾಶಂ) ಕುರುರಾಜ, ಗುರುಗಳ ಶರಾಸಾರಮಂ ನೀನೆ ಕಂಡಯ್.

ಕಳಶನದೀಜರ್ ಭಕ್ತಿಗೆ
ಕಳಶಾರೋಹಣಮಿದೆನಿಸಿ ನೆಱಪಿದರವರೊಂ

ದಳವಲ್ತು ಕಾದಿ ಗೆಲಲಾ
ರಳವಲ್ತರ್ಜುನನ ಶೌರ್ಯಮಂ ನೀನಱಿಯಾ ? ೨೫

ಬಕನಂ ಹಿಡಿಂಬನಂ ಕೀ
ಚಕನಂ ಕಿಮ್ಮೀರನಂ ಜಟಾಸುರನಂ ಕೊಂ
ದ ಕಲಿ ಜರಾಸಂಧನನಿ
ಕ್ಕಿ ಕೊಂದ ಬಲ್ಲಾಳ್ ಮರುತ್ಸುತಂ ಕೇವಳನೇ ೨೬

ಪವನಸುತಂ ಗದೆಗೊಳೆ ಗಾಂ
ಡಿವಿ ಬಿಲ್ಗೊಳೆ ಕಯ್ದುಗೊಳ್ವ ಮಾರ್ಕೊಳ್ವದಟರ್
ಭುವನದೊಳಿಲ್ಲವರ್ಗಳ ಬಾ
ಹುವಿಕ್ರಮಂ ನಿನಗೆ ಪೊಸತೆ ಕೌರವರಾಜಾ ೨೭

ಇವರುಮಿರ್ಕೆ : ಭರತಕುಲಶಿರಶ್ಶೇಖರಂ ಧರ್ಮಪುತ್ರಂ ತನ್ನ ಧರ್ಮಬಲದಿಂದಿರ್ದಲ್ಲಿಯೆ ಗೆಲ್ಲನೆ ?

ದಾನಂ ಪ್ರಿಯವಾಕ್ಸಹಿತಂ
ಜ್ಞಾನಮಗರ್ವಂ ಕೃಪಾನ್ವಿತಂ ಶೌರ್ಯಮೆನಿ
ಪ್ಪೀನುಡಿಯನೆ ನುಡಿಯಿಸಿದುದು
ದಾನಂ ಜ್ಞಾನಂ ಕ್ಷಮಾಗುಣಂ ಧರ್ಮಜನಾ ೨೮

ದುರ್ಯೋಧನಂ—ಇರು, ಇರು, ಸಂಜಯ,

ಸ್ಥಿರಸತ್ಯವ್ರತಿಯೆಂದು ಧರ್ಮರುಚಿಯೆಂದಾ ಧರ್ಮಪುತ್ರಂ ದಯಾ
ಪರನೆಂದೆಲ್ಲರ ಪೇೞ್ದ ಮಾತು ಪುಸಿಯಾಯ್ತಾ ಕಾರ್ಮುಕಾಚಾರ್ಯನಂ
ಗುರುವಂ ಬ್ರಾಹ್ಮಣನಂ ತೊದಳ್ನುಡಿದು ಕೊಂದಾಗಳ್ ಮೃಷಾಪಾತಕಂ
ಪರಮೆಂಬೀ ನುಡಿಯಿಂ ಪೃಥಾಪ್ರಿಯಸುತಂ ಪಾಪಕ್ಕೆ ಪಕ್ಕಾಗನೇ ೨೯

ಆ ನಿನ್ನ ವೀರರೋ !

ವನಿತೆಯ ಕೇಶಮಂ ಸಭೆಯೊಳೆನ್ನನುಜಂ ತೆಗೆವಲ್ಲಿ ಗಂಡನಾ
ಗನೆ! ಭಗದತ್ತನಾನೆ ಬರಿಯೆಲ್ವುಡಿವನ್ನೆಗಮೊತ್ತೆ ಗಂಡನಾ
ಗನೆ! ಕೊಲಲೊಲ್ಲದಂಗಪತಿ ಬಿಲ್ಗೊಳೆ ಕೋದೆಚೆವಲ್ಲಿ ಗಂಡನಾ
ಗನೆ! ಕುರುಬಾಲಸಂಹರಣಮಾತ್ರದೆ ಮಾರುತಿ ಗಂಡನಾದನೇ? ೩೦

ಎನಗಾ ಜೂದಿನೊಳಗ್ರಜಾನುಜಸಮೇತಂ ಗಂಡುದೋಱ್ಲ್ಯಾಗಿ ಕಾ
ನನದೊಳ್ ವಲ್ಕಲಧಾರಿಯಾಗಿ ಹರನೊಳ್ ದಿವ್ಯಾಸ್ತ್ರಮಂ ಬೇಡೆ ಬಿ
ಳ್ತನದಿಂ ತಾಪಸನಾಗಿ ಪೇಡಿಯೆನೆ ಮತ್ಸ್ಯಾವಾಸದೊಳ್ ವಾಸುದೇ
ವನ ನಂಟಂ ನಟನಾಗಿ ಬಾರದ ಭವಂ ಬಂದಂ ಪೃಥಾನಂದನಂ ೩೧

ಸಭೆಯೊಳ್ ತಮ್ಮಯ ಪಕ್ಕದೆನ್ನನುಜನಾಪಾಂಚಾಲಿಯಂ ಪಂಚವ
ಲ್ಲಭೆಯಂ ಮೋದೆಯುಮಲ್ಲಿ ಮಿಳ್ಮಿಳನೆ ನೋಡುತ್ತಿರ್ದ ಬಲ್ಲಾಳ್ಗಳಿ
ಲ್ಲಿ ಭರಂಗೆಯ್ದಪರೀ ಪರಾಕ್ರಮುಮಿಮಾ ಪೆರ್ಮಾತುಮಿಮಾ ಗಂಡುಮಿಮಾ
ಸುಭಟಾಲಾಪಮುಮೆಲ್ಲಮಾ ನೃಪಸುತರ್ಗಂದೆಲ್ಲಿ ಪೊಕ್ಕಿರ್ದುದೋ ೩೨

ಬಿಡು ಸಾಲ್ಗುಂ! ಆ ಖಡವುಗಳನೇನೆಂದಾಡುವೆ!

ಗುರುವಂ ಪ್ರೋಜ್ಝಿತಚಾಪನಂ ಪುಸಿದು ಕೊಂದಾಬೀರಮಂ ಭೀಷ್ಮರಂ
ಶರಶಯ್ಯಾಗತರಂ ಕಱುತ್ತು ಗುಱಿಯೆಚ್ಚಾ ಪೊಚ್ಚಱಿಂ ಕರ್ಣನಂ
ವಿರಥಜ್ಯಾಯುಧನೆನ್ನದೆಚ್ಚು ತವೆ ಕೊಂದಾ ಶೌರ್ಯಮಂ ಪಾಂಡುಪು
ತ್ರರೆ ಬಲ್ಲರ್ ಮೆಱೆಯಲ್ಕೆ ಸಾಹಸಧನಂ ದುರ್ಯೋಧನಂ ಬಲ್ಲನೇ?

ಪೊೞ್ತು ಕಳೆವುದು! ನಡೆ, ಭೀಮನಂ ತೋಱು.

ಸಂಜಯಂ—ಸ್ವಾಮಿಹಿತಂ ನುಡಿಯಿಪುದು, ಕ್ಷಮಿಸು! ಈ ಮೂರ್ಖತನಂ ಬೇಡ. ನೀಂ ಪ್ರತಿಕೂಲದೈವನ್ನೈ; ಅನುಕೂಲದೈವರ್ ಪಾಂಡವರ್.

ದುರ್ಯೋಧನಂ—ಮೂರ್ಖ ಸಂಜಯ,

ಸಮರಜಯಂ ದೈವಾಯು
ತ್ತಮದಱನಾಪುರುಷಕಾರಮೆನಗಾಯ್ತಿಾಗಳ್
ಯಮನಂದನಾದಿಗಳೊಳೊಂ
ದೆ ಮೆಯ್ಯೊಳಾಂತಿಱಿವೆನೆನ್ನ ಚಲಮಂ ಮೆಱೆವೆಂ ೩೪

ಸುರಸಿಂಧೂದ್ಭವಕುಂಭಜನ್ಮದಿನಕೃತ್ಪುತ್ರಾದಿಗಳ್ ಸಾಯೆ ಸಂ
ಗರದೊಳ್ ಪಾಂಡವರಂ ಗೆಲಲ್ ನೆಱೆಯನಿನ್ನೇಕಾಕಿ ದುರ್ಯೋಧನಂ
ಸೆರಗಂ ಪಾರ್ದಪನೆನ್ನುಮಿಾ ಧರೆ ಭುಜಾದಂಡಂ ಗದಾದಂಡಮೆಂ
ಬೆರಡುಂ ಸಂಜಯ ಮಜ್ಜಯಕ್ಕೆ ಸೆರವಿನ್ ಮತ್ತಾರ್ ನೆರಂಜಾರ್ವೆನೋ!

ಸಂಜಯಂ—ಅಭಿಮಾನಧನ, ಛಲದಂಕಮಲ್ಲ, ಆರುಮಂ ನಿರಾಕರಿಸು
ವಯ್. ಶ್ರೀಕೃಷ್ಣಂ ಮಹಾವಿಷ್ಣು,
ಪವನಾತ್ಮಜಂ ಮಹಾರಥ
ನವನಿಪ ಸಮರಥನೆ ನೀನದರ್ಕಧಿಕನೊಳಾ
ಪವನಾತ್ಮಜನೊಳ್ ಮಱೆ ಬ
ದ್ಧವೈರಮಂ ಸಂಧಿಮಾಳ್ಪುದುತ್ತಮಪಕ್ಷಂ ೩೬

ದುರ್ಯೋಧನಂ—ಕೃಷ್ಣಂ ಗಡ! ಭೀಮಂ ಗಡ! ದೈವಂ ಗಡ!
ಭೂತಂ ಗಡ!

ಪುರುಷರ್ ಮೂವರೊಳೊರ್ವನೆಂಬರಸುರಪ್ರಧ್ವಂಸಿಯೆಂಬರ್ ಜಗ
ದ್ಗುರುವೆಂಬರ್ ಪೆಱರ್ಗೇಕೆ ತೇರನೆಸಪಂ ಧರ್ಮಾನುಜಂಗೇಕೆ ಕಿಂ
ಕರನಾದಂ ಕರವೇಱಯಾದನದಱಂ ಸೂತಂ ಭಟಂ ಪೇಱಯೆಂ
ಬರವಾತೊಪ್ಪುಗುಮಾದಿದೇವನೆನಿಸಲ್ ಕೃಷ್ಣಂಗದೆಂತೊಪ್ಪುಗುಂ ೩೭

ಅನಿಮೇಷಾದ್ಯವತಾರಂ
ತನಗಾಯ್ತು ದಶಾವತಾರಮಲ್ಲದೊಡಿರದ
ರ್ಜುನನ ರಥಮೆಸಪ ಪನ್ನೊಂ
ದನೆಯದು ಸೂತಾವತಾರಮುಂ ಹರಿಗಾಯ್ತೇ ೩೮

ಅವನ ರಹಸ್ಯಮಂ ಕೇಳ್, ಪೇೞ್ವೆಂ.

ಅನುಜೆಯನಿತ್ತು ನರಂಗಾ
ತನ ತನಯಂಗಿತ್ತು ತನ್ನ ಮಗಳಂ ತಾನಾ
ತನ ರಥಮನೆಸಗಿ ಧರ್ಮಜ
ನನುಜನ ನೆವದಿಂದಮುರಸುಗೈವಂ ಕೃಷ್ಣಂ ೩೯

ನಿನ್ನಾ ಭೀಮನೊರ್ವಂ !

ಅತಿರಥನಾತಂ ಗಡ ! ಬಲ
ಯುತಸಮರಥನೆನ್ನೊಳಧಿಕಬಲವಂತಂ ಮಾ
ರುತಿ ಗಡ ! ಮಹಾರಥಂ ಮಾ
ರುತಿಯುಂ ! ತದ್ರಥದ ಗಾಲಿಗಳ್ ದೊಡ್ಡಿದುವೇ ? ೪೦

ಪೆಱರಂ ಪೊಗೞ್ದಪೆ ಯೆಮ್ಮಂ
ಕಿಱಿಯರ್ ಮಾಡಿದಪೆ ಯೆಲವೊ ಸಂಜಯ ! ನೀನುಂ
ಪೆಱನೊರ್ವಂ ಬಿಲ್ಲೋಜಂ
ಪೆಱನೊರ್ವಂ ಸಿಂಧುಪುತ್ರನಾಗಲ್ ಬಗೆವೋ ? ೪೧

ಸಂಜಯಂ—(ಆತ್ಮಗತಂ)

ಎನಿತೆನಿತಂ ಕಲಿಸಿದೊಡಂ
ತನಿತನಿತುಂ ನೈಜಭಾವಮಕ್ಕುಂ ನೃಪನಂ
ದನನೆಂತುಮಂತು ಕರ್ಕಶ
ತನುವಂತಶ್ಶೂನ್ಯಮಕ್ಕುಮುನ್ನತವಂಶಂ ೪೨

(ಪ್ರಕಾಶಂ) ಫಣಿರಾಜಕೇತನ, ಯುದ್ಧಮನೆ ನೀಂ ಪಿಡಿವೊಡೆ ಅಶ್ವತ್ಥಾಮನಿರ್ಪಂ, ಬಲರಾಮನಿರ್ಪಂ ; ಅವರೊಳೊರ್ವಂಗೆ ಸೇನಾಧಿಪತ್ಯಾಭಿಷೇಕಮಂ ಮಾಡಿ ಪಗೆಯಂ ಕೈಗೆ ಮಾೞ್ಪುದು.

ದುರ್ಯೋಧನಂ—ತ್ರಿದಶನದೀಸುತನಿಂ ತೀ
ರದ ಕಜ್ಜಂ ಮುನ್ನೆ ಕಳಶಸಂಭವನಿಂ ತೀ
ರದ ಕಜ್ಜಮಿನಜನಿಂ ತೀ
ರದ ಕಜ್ಜಂ ದ್ರೋಣಪುತ್ರನಿಂ ತೀರ್ದಪುದೇ ೪೩
ದ್ರೋಣನೆಮಗೊಳ್ಳಿಕೈದಂ
ದ್ರೋಣನ ಸುತನೊಳ್ಳಿಕೈಯದಿರ್ಕುವೆ ಸಮರ
ಕ್ಷೋಣಿಯೊಳಿನ್ನವನಾಸೆಯೆ ?
ಮಾಣೆಯಣಂ, ಕಯ್ಪೆಸೂರೆಯ ಕುಡಿಯೇಂ ಮಿಡಿಯೇಂ ೪೪
ತಪನಸುತಂ ಬೇಱೂಂ ಬೇ
ಱೆ ಪೊಲ್ಲದಂ ನುಡಿದನಾತನಂ ಬಿಸುಟಂ ಟ
ಕ್ಕಿಪ ನುಡಿಯಂ ನುಡಿವನೆ ಮಱೆ
ಯ ಪಾಂಡವಂ ಬಗೆದು ನೋೞ್ಪೊಡಶ್ವತ್ಥಾಮಂ ೪೫
ಹಲಿಯುಂ ರಣಕೇಳಿಕುತೂ
ಹಲಿಯುಂ ನಚ್ಚಿರ್ದೆನವನುಮಾಹವಕೋಲಾ
ಹಲದಲ್ಲಿ ತೀರ್ಥಯಾತ್ರಾ
ಚ್ಛಲದಿಂದಮಗಲ್ದು ಪೋದನಿನ್ನುಂ ಬಾರಂ ೪೬
ಮಡಿಗುಮೆ ಪಗೆ, ರವಿಸುತನಿಂ
ಮಡಿಗುಂ, ಮೇಣ್ ಶೌರ್ಯಶಾಲಿ ದುಶ್ಶಾಸನನಿಂ
ಮಡಿಗುಂ, ಮೇಣೆನ್ನಿಂದಂ
ಮಡಿಗುಂ, ಪೆಱಪೆಱರಿನೆನ್ನ ಪಗೆ ಮಡಿದಪುದೇ ? ೪೭
ಕಾನೀನಂ ದ್ರೋಣನದೀ
ಸೂನುಗಳೞಿದಿಂಬೞಿಕ್ಕೆ ಪೆಱರೆನಗಿಲ್ಲೆಂ
ದಾನೆ ಗಳಿತಾಶ್ರುಜಲದಿಂ
ಸೇನಾಪತ್ಯಾಭಿಷೇಕಮಂ ಮಾಡಿದಪೆಂ ೪೮

ಅಯ್ಯೋ, ಸಂಜಯ,

ಎನಗಿರ್ವರುಮೆರಡುಂ ತೋಳ್
ಎನಗಿರ್ವರುಮೆರಡು ಕಣ್ಗಳೆನ್ನರೆ ಯುವರಾ
ಜನುಮಂಗರಾಜನುಂ ಪೋ
ಯಿನೆ ಸಂಜಯ ಮತ್ತಮೆನಗೆ ಮಾನಸವಾಕೇ ೪೯

ಕೞಿದಂ ದಿನಕರತನಯಂ
ಕೞಿದಂ ಯುವರಾಜನಪ್ಪ ದುಶ್ಶಾಸನನುಂ
ತುೞಿಲಾಳ್ಗಳನಿರ್ವರುಮಂ
ಕೞಿಪಿ ಸುಯೋಧನನ ಬಾೞ್ವುದಂ ನಂಬಿದಿರೇ ? ೫೦

ಎನಗೆ ಮನಮಿಂದು ಶೂನ್ಯಂ
ಮನೆ ಶೂನ್ಯಂ ಬೀಡು ಶೂನ್ಯಮಾದುದು ಸಕಳಾ
ವನಿ ಶೂನ್ಯಮಾಯ್ತು, ದುಶ್ಶಾ
ಸನನಿಲ್ಲದೆ ಕರ್ಣನಿಲ್ಲದಾನೆಂತಿರ್ಪೆಂ ? ೫೧

[ ತೆರೆಯಲ್ಲಿ ]

ಆಳ್—ಇತ್ತಲಿತ್ತಲ್ ವೃದ್ಧರಾಜರ್ !

ಸಂಜಯಂ—ಹಾ, ಕಷ್ಟಂ, ಕಷ್ಟಂ. ಕುಮಾರ ಸುಯೋಧನ, ಸೈರಿಸು ಸೈರಿಸು. ನಿನ್ನಲ್ಲಿಗೆ ಜನನೀಜನಕರ್ ಅಱಸುತ್ತುಂ ಬಂದರ್. ಅವರ ಚರಣಾರವಿಂದವಂದನಂಗೆಯ್ದು ಮನಃಕ್ಷತಮನಾಱಿಸಲ್ವೇೞ್ಪುದು.

ದುರ್ಯೋಧನಂ—ಬಾಂಧವರನಿಱಿಸಿ ಸರಸಿಜ
ಬಾಂಧವತನಯನುಮನೆನ್ನ ತಮ್ಮನುಮಂ ನ
ಮ್ಮಂಧನರೇಂದ್ರನ ಮೊಗಮಂ
ಗಾಂಧಾರಿಯ ಮೊಗಮನಾವ ಮೊಗದೊಳೆ ನೋೞ್ಪೆಂ ? ೫೨

ಅರಿಭೂಪಾಲರನಿಕ್ಕಿ ಗೆಲ್ದೊಸಗೆಯಿಂ ತೂರ್ಯಸ್ವನಂ ಪೊಣ್ಮೆ ಸೋ
ದರರುಂ ಮಕ್ಕಳುಮಾಪ್ತರುಂಬೆರಸು ಬಂದಾನಂದದಿಂ ಕಾಣ್ಬೆನೆಂ
ದಿರಲಿಂತಾಯ್ತು ವಿಧಾತ್ರ ಮದ್ಗುರುಗಳಂ ದುಃಖಾತ್ಮರಂ ಶೋಕತ
ಪ್ತರರಂ ಮೆಯ್ಯೊಳೆ ಬೀೞ್ವೆ ಕಣ್ಬನಿಗಳಿಂ ಕಾಣ್ಬಂತುಟಂ ಮಾಡಿದೈ ೫೩

ಕಂದ ನಿಜಾನುಜರೆಲ್ಲಿದ
ರೆಂದೆನ್ನಂ ಜನನಿ ಬಂದು ಬೆಸಗೊಂಡೊಡದೇ
ನೆಂದು ಮಱುಮಾತುಗುಡುವೆಂ ?
ಕೊಂದರ್ ಕೌಂತೇಯರೆಂದು ಬಿನ್ನೈಸುವೆನೋ ! ೫೪

ಹಾ ! ದುಶ್ಶಾಸನಾ ! ಹಾ ಕರ್ಣಾ ! (ಮೂರ್ಛೆವೋಪಂ)

[ ಆಳ್, ಧೃತರಾಷ್ಟ್ರಂ, ಗಾಂಧಾರಿ, ]

ಆಳ್—ಇತ್ತಲಿತ್ತಲ್ ವೃದ್ಧರಾಜರ್ !

ಧೃತರಾಷ್ಟ್ರಂ—ಪಡೆ ಪನ್ನೊಂದಕ್ಷೋಹಿಣಿ
ಗೊಡೆಯನೆ ಮೂರ್ಧಾಭಿಷಿಕ್ತನೇ ಮೂಱುಂ ಬೆ
ಳ್ಗೊಡೆಯ ನಡುವಿರ್ಪ ನೀನಿ
ರ್ದೆಡೆಯುಮನೆಮಗಱಿಯದಂತುಟಾದುದೆ ಮಗನೇ ೫೫

ಆಳ್—ತಾಯೆ, ಪಿಂತಿರಿಂ. ಕಾರ್ಯಂ ಕೆಟ್ಟುದು. ಇದೊ, ಮಹಾರಾಜನ
ಮೇಲೆ ಕವಿದು ಬಿೞ್ದು ಸಂಜಯಂ ಅೞುತ್ತಿರ್ಪಂ.

ಧೃತರಾಷ್ಟ್ರಂ—ಹಾ ಕುರುಕುಲಚೂಡಾಮಣಿ !
ಹಾ ಕುರುಕುಲಚಕ್ರವರ್ತಿ ! ಹಾ ಸಕಲಧರಿ
ತ್ರೀಕಾಂತ ! ನಿನ್ನುಮಂ ಪರ
ಲೋಕಕ್ಕಟ್ಟಿದನೆ ಕಾಯ್ದು ಮಾಯ್ದು ವಿಧಾತ್ರಂ ! ೫೬

ಗಾಂಧಾರಿ—ಮೃಗಧರಕುಲಲಕ್ಷ್ಮೀವ
ಲ್ಲಗೆ ಪೆಱರಾರ್ ನೀನೆ ಮುನ್ನಡರ್ಪೆನಲಿರ್ದೈ

ಮಗನೆ, ಲಯಕಾಲಭೀಮೋ
ರಗನುರಗಪತಾಕ ನಿನ್ನುಮಂ ನುಂಗಿದನೇ? ೫೭

ಎಮಗಂಧಯಷ್ಟಿಯಾಗಿ
ರ್ದ ಮಗನೆ, ನೀನುಳ್ಳೊಡೆಲ್ಲಮೊಳವೆಂದಿರೆ ನಿ
ನ್ನುಮನಿರಿಸದೆ ಕುರುವಂಶಾ
ನಿಮಿತ್ತರಿಪು ಪಾಶಪಾಣಿ ಸವಿನೋಡಿದನೇ! ೫೮

ಗುರುಚರಣಂಗಳ್ಗೆಱಗದೆ
ಪರಕೆಯನಾದರದಿನಾಂತುಕೊಳ್ಳದೆ ಮೋನಂ
ಬೆರಸಿರ್ಪುದು ನಿನಗುಚಿತಮೆ
ಗುರುವಿನಯಮನೇಕೆ ಮಱೆದೆ ಕುರುಕುಲತಿಲಕಾ ೫೯

ಮಡಿದೀ ದುಶ್ಶಾಸನನೇಂ
ನುಡಿಯಿಸುವನೊ ಕುರುನರೇಂದ್ರ ದುರ್ಮರ್ಷಣನೇಂ
ನುಡಿಯಿಸುವನೊ ದುಷ್ಕರ್ಣಂ
ನುಡಿಯಿಸುವನೊ ನೀನುಮುಸಿರದಿರ್ಪುದೆ ಮಗನೇ! ೬೦

ಸಂಜಯಂ—ತಾಯೆ, ಪ್ರಳಾಪಂಗೆಯ್ಯದಿರ್. ಕರ್ಣದುಶ್ಶಾಸನಾದಿಗಳ ಸಾವಿನೊಳ್ ಶೋಕೋದ್ರೇಕದಿಂ ಮೂರ್ಛೆಗೆ ಸಂದಿರ್ದಪಂ. ಈಗಳೆ ಚೇತರಿಸುಗುಂ.

ದುರ್ಯೋಧನಂ—ನಮಸ್ಕರಿಸುವೆಂ ನಿರ್ಭಾಗ್ಯಂ.

ಗಾಂಧಾರಿ—ಅಪ್ಪ, ಬರ್ದುಕಿದೆಯ!

ಧೃತರಾಷ್ಟ್ರಂ—ನಮ್ಮ ಸಕಲಸೌಭಾಗ್ಯ, ಶಾಂತಮಕ್ಕೆ ನಿನ್ನೀ ಕ್ರೂರ ವಿಧಿ!

ಸಂಜಯಂ—ಅದರ್ಕೆ ತಕ್ಕ ಶಾಂತಿಯಂ ಬೆಸಸುವುದು ಪಿರಿಯರ್.

ಧೃತರಾಷ್ಟ್ರಂ—ಕಂದ, ಸುಯೋಧನ, ಸಮರಾನುಬಂಧಮಂ ಮಾಣ್ಬುದು.

ಶ್ರೀವನಿತೆಗೆ ನಿಜವಿಜಯ
ಶ್ರೀವನಿತೆಯೆ ಸವತಿಯಾಗೆ ರಿಪುನೃಪರಂ ಶೌ
ರ್ಯಾವಷ್ಟಂಭದೆ ಗೆಲ್ದ ಜ
ಯಾವಸಥನಸಾಧ್ಯನಲ್ತೆ ಸಾಹಸಭೀಮಂ ೬೧

ಧರ್ಮಪುತ್ರನಾದೊಡೆ ಇನ್ನುಂ ಪ್ರೇಮಾರ್ಥಿಯಾಗಿರ್ಪಂ.

ಯಮಸುತನಿಂಬುಕೈವನೆಮಗಿನ್ನುಮೊಡಂಬಡು ಕಂದ ಸಂಧಿಯಂ
ಸಮಗೊಳಿಸಲ್ಕೆ ಸಂಜಯನನಟ್ಟುವೆ, ಭೀಮನೊಳಾದ ಬದ್ಧವೈ
ರಮನುೞಿ, ನೋಡದಿರ್ ಸುತಸಹೋದರದುಃಖಮನೀವುದರ್ಧರಾ
ಜ್ಯಮನವರ್ಗಣ್ಣ ! ಕಾಲ್ವಿಡಿದು ಬೇಡುವೆನಂಧಪಿತಂ ಸುಪುತ್ರನಂ ೬೨

ಗಾಂಧಾರಿ—ಪರಿಣತವಯಸರೆಮಿರ್ಕ
ಣ್ಗುರುಡರೆಮೆಮಗಿಂಬುಕೈವುದುಚಿತಂ ನಿನ್ನೀ
ಗುರುನುಡಿದ ನುಡಿಗೊಡಂಬಡು
ಗುರುವಚನಮಲಂಘನೀಯಮೆಂಬುದು ಮಗನೇ ೬೩

ಸಮರವ್ಯಾಪಾರಂ ಮಾ
ಣ್ದು ಮಗನೆ ನಿಜಶಿಬಿರದತ್ತ ಬಿಜಯಂಗೆಯ್ ! ಸ
ತ್ತ ಮಗಂದಿರ್ ಸತ್ತರ್, ನೀ
ನೆಮಗುಳ್ಳೊಡೆ ಸಾಲ್ವುದವರನಿಂ ತಂದಪೆವೇ ೬೪

ಧೃತರಾಷ್ಟ್ರಂ—ವೀರಶತಜನನಿಗೀ ಗಾಂ
ಧಾರಿಗೆ ದುಃಖಶತಜನನಿವೆಸರಾಯ್ತಿಾಗಳ್
ಕೌರವಪತಿ, ದುಃಖಮಹಾ
ಭಾರಮನಾಂತಾಯುಸಕ್ಕೆ ಗುಱಿಯಾದುದಱಿಂ ೬೫

ಈಕೆಯಂ ಸಂತೈಸುವುದು ನಿನಗೆ ಧರ್ಮಂ. ಚಲದಿಂದೇನಪ್ಪುದು ? ನಿನ್ನ ತಮ್ಮಂದಿರಾದುದಂ ಕಂಡು ತನ್ನ ತಮ್ಮಂದಿರ್ಗೆ ಬೆದಱಿ

ಧರ್ಮಜಂ ಸಂಧಿಮಾಡಲ್ ಬಗೆದಂ. ನೀನೊಪ್ಪುವುದು ತಡಂ, ಸಂಧಿಯಕ್ಕುಂ.

ಸಂಜಯಂ—ಯುಕ್ತಮಿದು ; ಕೈಕೊಳ್ ನಿನ್ನ ತಂದೆ ಯೆಂದುದಂ.

ದುರ್ಯೋಧನಂ—ನಿಮ್ಮ ಪೂರ್ವಪಕ್ಷಮೇ ನಮಗೆ ಸಿದ್ಧಾಂತಂ.

ತನ್ನೊಡವುಟ್ಟಿದರ್ ಪೆಸರ ನಾಲ್ವರೊಳೊರ್ವರುಮಿಲ್ಲದಿರ್ದೊಡಂ
ತನ್ನಸುವಂ ನಿವೇದಿಸುವನಗ್ನಿಗೆ ಧರ್ಮತನೂಜನೆಂದೊಡಾ
ನೆನ್ನೊಡವುಟ್ಟಿದರ್ ಪೆಸರ ನೂರ್ವರೊಳೊರ್ವರುಮಿಲ್ಲ ಬಾಳ್ವೆನೆಂ
ಬೆನ್ನಱಯಾಸೆಯಂ ಬಿಸುಡಿಮೆನ್ನವರಾದುದನಾಗದಿರ್ಪನೇ ೬೬

ಸಾಧಿಸುವೆಂ ಫಲ್ಗುಣನಿಂ
ಸಾಧಿಸುವೆಂ ಪವನಸುತನ ಬಸಿಱಿಂ ಹಾ ಕ
ರ್ಣಾ! ದುಶ್ಶಾಸನ! ತೆಗೆವೆಂ,
ಸಾಧಿಸಿ ನಿರ್ದೋಷಿಯುಮುಜನೊಳ್ ಪುದುವಾಳ್ವೆಂ ೬೭

ಆಮ್ಮಗನೆ ನಿಮಗೆ ಧರ್ಮಜ
ನೇಮ್ಮಗನಲ್ಲನೆ ಬಱಕ್ಕೆ ನೀಮುಂ ತಾಮುಂ
ನಿಮ್ಮೊಳ್ ನೇರ್ಪಡುಗಿಡದೆ ಸು
ಖಮ್ಮನ್ನಿನ ತೆಱದೆ ಬಾಳ್ವುದಿನ್ ಬಿಡಿಮೆನ್ನಂ ೬೮

ಧೃತರಾಷ್ಟ್ರಂ—ನೀನೆಂತುಂ ಎಮ್ಮ ಪೇಳ್ವುದಂ ಕೈಕೊಳ್ಳದೆ ವೈರಮನೆ ಕೈಕೊಂಡು ಪಾಂಡುನಂದನರೊಳ್ ಕಾದಿದಲ್ಲದೆ ಸಂಧಿಯನೊಡಂಬಡೆಯುತ್ತಿಪ್ಪನಂ ನೀನೆಮಗಿನಿತನೊಳ್ಳಿಕೈಯಲ್ವೇಳ್ಪುದು. ನೆಗಳ್ವ ಕಜ್ಜಮಾವುದುಮಂ ನಿಮ್ಮಜ್ಜನೊಳಾಲೋಚಿಸಿ ನೆಗಳ್ವುದು. ಇದೊಂದಂ ಮಾಡು.

ದುರ್ಯೋಧನಂ— ಮಹಾಪ್ರಸಾದಂ.

## ೩ನೆಯ ರಂಗಂ

[ ಮರುಳ್ಗಳ್, ಸಂಜಯಂ, ದುರ್ಯೋಧನಂ ]

ಸಂಜಯಂ—ಭಯಂಕರಂ ರಣರಂಗಂ! ಅದೊ

ಪೆಣದಿನಿಗಳ ತಂಡಂ ಬ
ಲ್ಪೆಣಗಳನಱಸುತ್ತುಮಲ್ಲಿ ಬರೆವರೆ ಸಾರ
ಲ್ಕಣಮಿಾಯದೆ ತಮ್ಮಾಳ್ದನ
ಪೆಣನಂ ಕಾದಿರ್ಪರಲ್ಲಿ ಸುತ್ತ ಭಟರ್ಕಳ್

ಇತ್ತ ನೋಡು—

ಇನಿತಿನಿತು ಚಿಂತೆಯೊರ್ಮೆಯೆ
ತಿನೆ ತವುಗುಮಿದೆಂದು ತಾಮುಮಾನೆಯ ಪೆಣನಂ
ತಿನಲಾಱದೆ ಪೆಱಗಿಕ್ಕದೆ
ಮನಮಂ ಪಸುತಿರ್ಪುವಿಲ್ಲಿ ಲೋಭಿಮರುಳ್ಗಳ್

ದುರ್ಯೋಧನಂ—ಇದೇನ್ ಈ ಮರುಳ್ಗಳ್ ಎಮ್ಮಂ ಮುತ್ತುವುವು!

೧ ನೆಯ ಮರುಳ್—ಅಕ್ಕ, ದುರ್ಯೋಧನಂ!

೨ ನೆಯ ಮರುಳ್—ನಿಲ್, ನಿಲ್. ದ್ರೌಪದೀದ್ರೋಹ, ನಿಲ್!

೩ ನೆಯ ಮರುಳ್—ನಿನ್ನನೆ ಪಾರ್ದು ಪಸಿದಿರ್ಪೆವು!

೧ ನೆಯ ಮರುಳ್-ಗುರುವಿನ ನೆತ್ತರಂ ಕುಡಿವೆನಪ್ಪೊಡೆ ಅವಂ ಬ್ರಾಹ್ಮಣಂ.

೨ ನೆಯ ಮರುಳ್—ನಿನ್ನ ತಮ್ಮನ ನೆತ್ತರಂ ಕುಡಿವೆನಪ್ಪೊಡೆ ಭೀಮನೆ ಪೀರ್ದಂ.

೩ ನೆಯ ಮರುಳ್-ಭೀಷ್ಮನ ಬಿಸುನೆತ್ತರಂ ಕುಡಿವೆನಪ್ಪೊಡೆ ಇನ್ನುಮೊಳಂ.

೧ ನೆಯ ಮರುಳ್—ಕುರುರಾಜ, ನಿನ್ನ ನೆತ್ತರ ಸವಿಯಂ ಬಯಸಿ ಬಾಯ್ವಾಯ್ವಿಡುವೆಂ.

೨ ನೆಯ ಮರುಳ್—ಊರುಭಂಗಮಪ್ಪುದು, ಇರು.

ಸಂಜಯಂ—ಕರ್ಣಕಠೋರಂ ಪಿಶಾಚದ ನುಡಿ.

ದುರ್ಯೋಧನಂ—ಛೀ! ಮರುಳ ಮಾತಿನೊಳ್ ಹುರುಳಿಲ್ಲ.

೨ ನೆಯ ಮರುಳ್—

ಅರಗಿನ ಮಾಡದೊಳ್ ವಿಷದ ಲಡ್ಡುಗೆಯೊಳ್ ಕೊಲಲೊಡ್ಡಿ ಬದ್ಧಮ
ತ್ಸರದೊಳೆ ವೈರಮಂ ಪದೆದು ಭೀಮನನಿಂತಿನಿತರ್ಕೆ ತಂದ ನೀಂ
ಮರುಳನೊ, ಭೂತಕೋಟಿವೆರಸಾಹವರಂಗದೊಳಾಡುತಿರ್ಪ ತಾಂ
ಮರುಳೆಯೊ? ನೋಳ್ಪೆವಿರ್ವರ ಮರುಳ್ತನಮಂ ಫಣಿರಾಜಕೇತನಾ! ೭೧

ದುರ್ಯೋಧನಂ—ಸಂಜಯ, ಮುಂದೆ, ಮುಂದೆ.

೨ ನೆಯ ಮರುಳ್—ನುಡಿಯದೆ ಪೋಗಲೀಯೆಂ!

೧ ನೆಯ ಮರುಳ್—ಪೋದೊಡೆ ದ್ರೌಪದಿಯಾಣೆ!

೩ ನೆಯ ಮರುಳ್—ಮಾಣಿ ಪೋದೊಡೆ ಕಲಿಭೀಮನಾಣೆ!

[ ದುರ್ಯೋಧನಂ ಗದೆಯಿಂ ಕುಟ್ಟುವಂ ]

ಮರುಳ್ಗಳ್—ಸಂಜೆವರಂ ನಿನ್ನಾಟಂ. [ ಓಡುವುವು ]

ಸಂಜಯಂ—ಮಹಾಸತ್ವ, ಈ ಮರುಳ್ಗಳೊಳೇನ್? ಬಿಜಯಂಗೆಯ್ಯಿಂ.
ಅಕ್ಕಟ!

ವಿನುತವಿರೋಧಿಮಂಡಳಿಕಮೌಳಿವಿಘಟ್ಟಿತಪಾದಪೀಠಕಾಂ
ಚನಕಮಳಾಯಮಾನಮಿವು ನಿಮ್ಮಯ ಮೆಲ್ಲಡಿ ಭಿಂಡಿವಾಳದಂ
ಬಿನ ಕರವಾಳ ಕಕ್ಕಡೆಯ ಕೊಂತದ ಧಾರೆಗಳುರ್ಚೆ ಸಂಗರಾ
ವನಿತಳದೊಳ್ ವಿಧಾತ್ರವಶದಿಂ ನಿಮಗಂ ನಡೆವಂತುಟಾದುದೇ ೭೨

ದುರ್ಯೋಧನಂ—ಕಣ್ಣೀರನೊರಸು, ಸಂಜಯ!

ತನುಜಾನುಜರ ವಿಯೋಗದ
ಮನಃಕ್ಷತಂ ನೋಯಿಸಲ್ಕೆ ನೆಱೆಯದು ಸಮರಾ
ವನಿಯೊಳುಡಿದಿರ್ದ ಕಯ್ದುಗ
ಳಿನಿಸುಂ ನೋಯಿಕುಮೆ ವಜ್ರಮನನಪ್ಪೆನ್ನಂ ೭೩

ನಡೆ, ನನ್ನ ಧೈರ್ಯಮಂ ಕಲಂಕದಿರು.

ಸಂಜಯ—ಇದಾರಿದು, ಆಚಾರ್ಯರಲ್ತೆ ?

ದುರ್ಯೋಧನಂ—ಆಚಾರ್ಯ, ಕೋಪದೊಳ್ ದೂಷಿಸಿದೆಂ.

ಅಱಿಯೆಮೆ ಬಿಲ್ಲ ಬಿನ್ನಣಕೆ ಗಾಂಡಿವಿಯಲ್ತು ಪಿನಾಕಪಾಣಿಯುಂ
ನೆಱೆಯನಿದಿರ್ಚಿ ನಿಮ್ಮೊಡನೆ ಕಾದಿ ಗೆಲಲ್ಕಿದು ನಿಮ್ಮುಪೇಕ್ಷೆಯೆಂ
ದಱಿಯೆನಿದೆನ್ನ ಕರ್ಮವಶಮೆಂದಱಿಯೆಂ ನಿಮಗಿಂತು ಸಾವದೇ
ತೆಱದಿನಕಾರಣಂ ನೆಱೆಯೆ ಸಂಭವಿಸಿರ್ದುದೊ ಕುಂಭಸಂಭವಾ ೭೪

ಸಂಜಯಂ—ಇವನ್ ಅಭಿಮನ್ಯು.

ದುರ್ಯೋಧನಂ—ಅಸಮಬಲ ನಿನ್ನ ವಿಕ್ರಮ
ಮಸಂಭವಂ ಪೆಱರ್ಗೆ ನಿನ್ನನಾನಿನಿತಂ ಪ್ರಾ
ರ್ಥಿಸುವೆನಭಿಮನ್ಯು ನಿಜಸಾ
ಹಸೈಕದೇಶಾನುಮರಣಮೆಮಗಕ್ಕೆ ಗಡಾ ೭೫

[ಕೈಮುಗಿವಂ]

ಸಂಜಯಂ—ಮಹಾರಾಜ, ಇತ್ತ ಬಾರದಿರ್ ಬಾರದಿರ್.

ದುರ್ಯೋಧನಂ—ಕಂಡೆಂ, ಲಕ್ಷ್ಮಣಕುಮಾರನಲ್ತೆ ? ವತ್ಸ,

ಜನಕಂಗೆ ಜಲಾಂಜಲಿಯಂ
ತನೂಭವಂ ಕುಡುವುದುಚಿತಮದುಗೆಟ್ಟೀಗಳ್
ನಿನಗಾಂ ಕುಡುವಂತಾದುದೆ
ತನೂಜ ನೀಂ ಕ್ರಮವಿಪರ್ಯಯಂಮಾಡುವುದೇ ? ೭೬

ಸಂಜಯ, ದುಃಖದೊಳೆ ದುಃಖಂ ; ತೋಱು ದುಶ್ಶಾಸನನೆಲ್ಲಿ ?
ಕರ್ಣನೆಲ್ಲಿ ?

ಸಂಜಯಂ—ಇದೆ ಅಣುಗದಮ್ಮಂ !

ದುರ್ಯೋಧನಂ—

ನಿಜಜೀವಂ ಪರಲೋಕದೊಳ್ ನಿಜಮಹಾಮಾಂಸಂ ಪಿಶಾಚಾಸ್ಯದೊಳ್
ನಿಜರಕ್ತಂ ರಿಪುಕುಕ್ಷಿಯೊಳ್ ನಿಜಶಿರಂ ನಕ್ತಂಚರೀಹಸ್ತದೊಳ್
ನಿಜಕಾಯಂ ಕುರುಭೂಮಿಯೊಳ್ ನೆಲಸೆ ಗಾಂಧಾರೀಜ ದುರ್ಯೋಧನಾ
ನುಜ ದುಶ್ಶಾಸನ ಭೀಮಭೀಮಗದೆಯಿಂ ಪಂಚತ್ವಮಂ ಪೊರ್ದಿದಯ್ ೭೭

ಜನನೀಸ್ತನ್ಯಮನುಂಡೆನಾಂ ಬೞಿಕೆ ನೀಂ ಸೋಮಾಮೃತಂ ದಿವ್ಯಭೋ
ಜನಮೆಂಬಿಂತಿವನುಂಡೆನಾಂ ಬೞಿಕೆ ನೀಂ ಬಾಲತ್ವದಿಂದೆಲ್ಲಿಯುಂ
ವಿನಯೋಲ್ಲಂಘನಮಾದುದಿಲ್ಲ ಮರಣಕ್ಕೆನ್ನಿಂದೆ ನೀಂ ಮುಂಚಿದಯ್
ಮೊನೆಯೊಳ್ ಸೂೞ್ ತಡಮಾಯ್ತ್ತಿದೊಂದೆಡೆಯೊಳಾಹಾ ವತ್ಸ
ದುಶ್ಶಾಸನಾ ೭೮

ಅನುಜನ ನೆತ್ತರನೀಂಟಿದ
ನ ನೆತ್ತರಂ ಜೀವಸಹಿತಮೀಂಟದೆ ದುರ್ಯೋ
ಧನನೆಂಬ ಪೆಸರ್ಗೆ ಮುಯ್ಯಾಂ
ಪನೆ ದುಶ್ಶಾಸನನ ಬನ್ನಮಂ ನೀಗುವೆನೇ ೭೯

ಈ ಮುಱಿದ ಕಳೇಬರಮಂ ನೋಡಲಾಱೆಂ ನಡ.

ಸಂಜಯಂ—(ಆತ್ಮಗತಂ) ಪ್ರಿಯಸಖಂ, ಕರ್ಣಂ. ದುಃಖಮೆಲ್ಲಂ ಮಱು
ಕೊಳಿಸುಗುಂ ರಾಜಂಗೆ.

ದುರ್ಯೋಧನಂ—ಹಾ, ಕರ್ಣಾ!

ಆನುಂ ದುಶ್ಶಾಸನನುಂ
ನೀನುಂ ಮೂವರೆ ದಲಾತನುಂ ಕಱಿದ ಬೞಿ
ಕ್ಕಾನುಂ ನೀನೆ ದಲೀಗಳ್
ನೀನುಂ ಮಗುೞ್ದಿತ್ತವೋದೆ ಅಂಗಾಧಿಪತೀ ೮೦

ನಿನ್ನ ಮಗಂ ವೃಷಸೇನಂ
ತನ್ನ ಮಗಂ ಸತ್ತನೆನ್ಮೆ ಲಕ್ಷ್ಮಣನುಂ ನೀ

ನೆನ್ನಂ ಸಂತೈಸುವುದಾಂ
ನಿನ್ನಂ ಸಂತೈಸೆ ಬಂದೆನಂಗಾಧಿಪತೀ ೮೧

ಅಱಿಯೆನಿದಂ ನಿನ್ನಿಂದಿನ
ತೆಱನಂ ನೀನೆನಗದೇಕೆ ಮುಳಿದಿರ್ಪೆಯೊ ಮೇಣ್
ಮಱುವಾತುಗುಡದೆ ರವಿಸುತ
ಮಱವಿಂದಿರ್ದಪೆಯೊ ಮೇಣ್ ಬೞಲ್ದಿರ್ದಪೆಯೋ ೮೨

ನಿನ್ನ ಕೆಳೆಯಂ ಸುಯೋಧನ
ನನ್ನೋಡದೆ ನುಡಿಯದಪ್ಪಿಕೊಳ್ಳದೆ ಬೆಸನೇ
ನೆನ್ನದೆ ಜೀಯೆನ್ನದೆ ದೇ
ವೆನ್ನದೆ ಏಕುಸಿರದಿರ್ಪೆ ? ಅಂಗಾಧಿಪತೀ ೮೩

ಅನೃತಂ ಲೋಭಂ ಭಯಮೆಂ
ಬಿನಿತುಂ ನೀನಿರ್ದ ನಾಡೊಳಿರ್ಕುಮೆ ರವಿನಂ
ದನ ನನ್ನಿ ಚಾಗಮಣ್ಮೆಂ
ಬಿನಿತರ್ಕಂ ನೀನೆ ಮೊತ್ತಮೊದಲಿಗನಾದಯ್ ೮೪

ಆನಱಿವೆಂ ಪೃಥೆಯಱಿವಳ್
ದಾನವರಿಪುವಱಿವನರ್ಕನಱಿವಂ ದಿವ್ಯ
ಜ್ಞಾನಿ ಸಹದೇವನಱಿವಂ
ನೀನಾರ್ಗೆಂದಾರುಮಱಿಯರಂಗಾಧಿಪತೀ ೮೫

ಒಡವುಟ್ಟಿದನೆಂದಱಿದೊಡೆ
ಕುಡುಗುಂ ರಾಜ್ಯಮನೆ ಧರ್ಮತನಯಂ, ನಿನಗಾಂ
ಕುಡಲಾರ್ತೆನಿಲ್ಲ ರಾಜ್ಯ
ಕ್ಕೊಡೆಯನನಱಿಯುತ್ತುಮಿರ್ದೆನಂಗಾಧಿಪತೀ ೮೬

ನೀನುಳ್ಳೊಡುಂಟು ರಾಜ್ಯಂ
ನೀನುಳ್ಳೊಡೆ ಪಟ್ಟಮುಂಟು ಬೆಳ್ಗೊಡೆಯುಂಟಯ್
ನೀನುಳ್ಳೊಡುಂಟು ಪೀಱಿಗೆ
ನೀನಿಲ್ಲದಿವೆಲ್ಲಮೊಳವೆ ಅಂಗಾಧಿಪತೀ ೮೭

ನಯನದೊಳಮೆರ್ದೆಯೊಳಂ ನಿ
ನ್ನಯ ರೂಪಿರ್ದಪುದು ನಿನ್ನ ಮಾತಿರ್ದಪುದೆ
ನ್ನಯ ಕಿವಿಯೊಳಗಿನನಂದನ
ವಿಯೋಗಮೆಂತಾದುದಯ್ಯ ಎನಗಂ ನಿನಗಂ ೮೮

ನಿನ್ನಂ ಕೊಂದ ಕಿರೀಟಿಯು
ಮೆನ್ನನುಜನನಿಕ್ಕಿ ಕೊಂದ ಭೀಮನುಮೊಳನಾ
ನಿನ್ನುಮೊಳೆಂ ಗಡ ! ಸಾಲದೆ
ನಿನ್ನಯ ಕೂರ್ಮೆಗಮದೆನ್ನ ಸೌಧರ್ಮಿಕೆಗಂ ೮೯

ಇನಸುತನಿರವಂ ದುಶ್ಶಾ
ಸನನಿರವಂ ಕಂಡುಮಿನ್ನುಮೆನ್ನಸುವಿದು ನೆ
ಟ್ಟನೆ ಪೋದುದಿಲ್ಲ ಕಲ್ಲೆರ್ದೆ
ತನದಿಂದೆನ್ನಂತು ಬಲ್ದಿನಾವನುಮೊಳನೇ ೯೦

ಸೂನುಗಳಱಿವಂ ಪ್ರಿಯಮಿ
ತ್ರಾನುಜರಱಿವಂ ವಿಧಾತ್ರ ! ನೀಂ ಕಾಣಿಸಿ ಇ
ನ್ನೇನಂ ಕಾಣಿಸಲಿರ್ದಪೆ
ನೀನೆನ್ನಂ ಪಾಪಕರ್ಮನಂ ನಿರ್ಗುಣನಂ ೯೧

ಅಪ್ಪ, ಸಂಜಯ !
ಆರೊಡನೆ ನುಡಿವೆನಱ್ತಿಯೊ
ಳಾರೊಡನೋಲಗದೊಳಿರ್ಪೆನಾರೊಡನೆ ಸಮಂ

ತಾರೋಗಿಪೆನೇಱುವೆನಾ
ನಾರೊಡನೆನ್ನಣುಗರಿಲ್ಲದಿಭವಾಜಿಗಳಂ ೯೨

ಕೆಳೆಯಂಗಾಯ್ತುಸುಮೋಕ್ಷಮಾಗದೆನಗಂ ಬಾಷ್ಪಾಂಬುಮೋಕ್ಷಂ ಧರಾ
ತಳಮಂ ಕೊಟ್ಟನಿವಂ ಜಲಾಂಜಲಿಯುಮಂ ನಾಂ ಕೊಟ್ಟೆನಿಲ್ಲನ್ಯಮಂ
ಡಳಮಂ ಸುಟ್ಟನಿವಂ ಪ್ರತಾಪಶಿಖಿಯಿಂದಾನೀತನಂ ಸತ್ಕ್ರಿಯಾ
ನಳನಿಂ ಸುಟ್ಟೆನುಮಿಲ್ಲ ಮತ್ಪ್ರಿಯತಮಂ ಕರ್ಣಂಗಿದೇಂ ಕೂರ್ತನೋ ೯೩

ಸಂಜಯಂ—ದೇವಾ, ಕರ್ಣನನಿನ್ ಮಱೆವುದು.

ಪೆಂಡಿರ್ ಪಳಯಿಸುವಂದದೆ
ಗಂಡರ್ ಪಳಯಿಸುವುದಾಯಮೋ ಛಲಮೋ! ಕೈ
ಕೊಂಡೆಸಪರಾರೊ ಕುರುಕುಲ
ಮಂಡನ ನೀನೆತ್ತಿಕೊಂಡ ಛಲಮನೆ ಮೆಱೆಯಾ ೯೪

ದುರ್ಯೋಧನಂ—ದರಹಸಿತಮುಖನ ಸುರಕುಂ
ಜರಗಮನನ ಕನಕಪರ್ವತಪ್ರತಿಮದಿನೇ
ಶ್ವರಸುತನ ರೂಪು ಚಿತ್ರಂ
ಬರೆದಂತಿರ್ದಪ್ಪುದು ಚಿತ್ತಭಿತ್ತಿಯೊಳೆನ್ನಾ ೯೫

ಗುರು ದೀಕ್ಷಾವಿಧಿಗಳ್ಗೆ ಮಂತ್ರಿ ಹಿತಕಾರ್ಯಾಳೋಚನಕ್ಕಾಳ್ದನು
ರ್ವರೆಯಂ ಕಾವ ಗುಣಕ್ಕೆ ನರ್ಮಸಚಿವಂ ಕ್ರೀಡಾರಸಕ್ಕಾನೆಯಾಳ್
ಗುರುಭಾರಕ್ಕಿಱಿವಾಳ್ ರಣಕ್ಕೆ ತುಱಿಲಾಳ್ ಕಟ್ಬಾಯದೊಳ್ ಮೇಳದಾಳ್
ಪರಿಹಾಸಕ್ಕೆನಿಸಿರ್ದನೆಂತು ಮಱೆವಂ ದುರ್ಯೋಧನಂ ಕರ್ಣನಂ ೯೬

ಸಂಜಯಂ—ದೇವಾ, ಶರಶಯನದೊಳ್ ಭೀಷ್ಮರಿತ್ತಲಿರ್ದಪರ್, ಬಿಜಯಂಗೆಯ್ಯಿಂ.

ದುರ್ಯೋಧನಂ—ಕುರುಪಿತಾಮಹ, ಬಾಲಕಂ ವಂದಿಸುವೆಂ.

ಸಂಜಯಂ—(ಕಿವಿಯೊಳ್) ಅಜ್ಜಾ, ನಿಮ್ಮ ಮೊಮ್ಮಂ ಕುರುಕುಲಾಂಬರ
ದ್ಯುಮಣಿ ದುರ್ಯೋಧನಂ ಬಂದಂ.

ಭೀಷ್ಮಂ—

ಧವಳಗಜೇಂದ್ರಮುಂ ಧವಳಚಾಮರಮುಂ ಧವಳಾತಪತ್ರಮುಂ
ಧವಳವಿಲೋಚನೋತ್ಪಲವಧೂಜನಮುಂ ಬೆರಸಷ್ಟದಿಕ್ತಟಂ
ಧವಳಿಸೆ ಕೀರ್ತಿಯಿಂ ಧವಳಮಂಗಳಗೇಯದಿನೊಪ್ಪಿ ಬರ್ಪ ಕೌ
ರವಧವಳಂಗೆ ದೇಸಿಗನೆ ಬರ್ಪವೊಲೊರ್ವನೆ ಬರ್ಪುದಾದುದೇ ೯೭

ಏಕಾಕಿಯಾಗಿ ನಿನ್ನ ಬಂದ ಬರವಿನೊಳೆ ಸಮರವೃತ್ತಾಂತಂ ತಿಳಿದುದು.

ದುರ್ಯೋಧನಂ—ಅಜ್ಜ, ನನಗೆ ಮಱುಗದಿರಿಂ.

ವಿನಯಮನೊಕ್ಕು ನಿಮ್ಮ ಗುರುವೃದ್ಧರ ಪೇಳ್ದ ಹಿತೋಪದೇಶಮಂ
ಮನದೊಳಿಱಿಂಕೆಗೊಂಡನಿಲನಂದನವೈರದೆ ನಿಮ್ಮನಿಂದ್ರನಂ
ದನನೊಡನಾನೆ ಕಾದಿಸಿದೆನಾನೆ ಕಡಂಗಿದೆನೆನ್ನ ಪಾಪಕ
ರ್ಮನ ಕತದಿಂದಮಿಾನಿಮಗವಿಾಯಿರವಾದುದೆ ಸಿಂಧುನಂದನಾ ೯೮

ಭೀಷ್ಮಂ—ಮಗನೆ, ಆದುದಾಯ್ತು; ವೃಥಾಸಂತಾಪಂ ಬೇಡ. ಇನ್ನಾ
ನುಂ ಪೇಳ್ದಮಾತಂ ಕೇಳ್ವೆಯಪ್ಪೊಡೆ, ಪಾಂಡವರನೊಡಂಬಡಿಸಿ
ಸಂಧಿಯಂ ಮಾಡಿ ಪೂರ್ವಕ್ರಮದೊಳ್ ನಡೆವಂತು ಮಾಳ್ಪೆಂ.
ಇನ್ನುಮವರ್ ಎಮ್ಮೆಂದುದಂ ಇಂಬುಕಯ್ವರಲ್ಲದೆ ಮಿಾಱುವ
ರಲ್ಲ. ನೀನುಮೆಮ್ಮ ಪೇಳ್ದುದಂ ವಿಾಱದೆ ನೆಗಱಲ್ವೇಳ್ಕುಂ.

ದುರ್ಯೋಧನಂ—ನಿಮಗೆ ಪೊಡೆಮಟ್ಟು ಪೋಪೆ
ಸಮಕಟ್ಟಿಂ ಬಂದೆನಹಿತರೊಳ್ ಸಂಧಿಯನೇಂ
ಸಮಕೊಳಿಸಲೆಂದು ಬಂದೆನೆ
ಸಮರದೊಳೆನಗಜ್ಜ ಪೇೞಿಮಾವುದು ಕಜ್ಜಂ ೯೯

ನೆಲಕಿಱಿವೆನೆಂದು ಒಗೆದಿರೆ ?
ಚಲಕಿಱಿವೆಂ ಪಾಂಡುಸುತರೊಳೀನೆಲನಿದು ಪಾ
ಚ್ಛೆಲನೆನಗೆ ದಿನಪಸುತನಂ
ಕೊಲಿಸಿದ ನೆಲನೊಡನೆ ಮತ್ತೆ ಪುದುವಾೞ್ವಪೆನೇ ? ೧೦೦

ಬಾಡಮನೈದನವರ್ ಮುಂ
ಬೇಡಿದೊಡಾನಿತ್ತೆನಿಲ್ಲ ರಾಜ್ಯಾರ್ಧಮನಾಂ
ಬೇಡಿಯುವರಲ್ಲಿಗಟ್ಟಿದೊ
ಡೇಡಿಸಿ ಚೋಡಿಸನೆ ಪವನನಂದನನೆನ್ನಂ ೧೦೧

ಪುದುವಾೞಲ್ಕಣಮಾಗದೆಂತುಮವರೊಳ್ ಸಂಧಾನಮಂ ಮಾಡಲಾಗದು ನೀಮಿಲ್ಲದೆ, ಅಜ್ಜ, ಬಿಲ್ಲ ಗುರುಗಳ್ ತಾಮಿಲ್ಲದಾಕರ್ಣನಿಲ್ಲದೆ ದುಶ್ಶಾಸನನಿಲ್ಲದಾರೊಡನೆ ರಾಜ್ಯಂಗೆಯ್ವೆನಾರ್ಗೆನ್ನ ಸಂಪದಮಂ ತೋಱುವೆನಾರ್ಗೆ ತೋಱಿ ಮೆಱೆವೆಂ ನಾನಾವಿನೋದಂಗಳಂ?

ಕ್ಷಮಿಸಿಂ ; ಎನ್ನಱಿಲಾಱದು. ಅಭಿಮಾನಮೊಂದುೞಿದುದು. ಅದನೆ ಬಳ್ವಿಡಿವಿಡಿವೆಂ.

ಭೀಷ್ಮಂ—ಸಂಜಯ, ಪೋಗು. ಗಾಂಧಾರಿಗಂ ಧೃತರಾಷ್ಟ್ರಂಗಂ ಪೇೞ್ "ಮೊಮ್ಮಂ ನುಡಿದ ನುಡಿಯನೆಂತುಂ ಒಡಂಬಡುವನಲ್ಲ. ಆಶ್ಚರ್ಯಂ ಆತನ ಸತ್ವಮುಂ ಏಕಾಂಗಸಾಹಸಮುಂ. ಮಾನಧನನಪ್ಪಾತನಂ ನಾವು ಕಾಡುವುದಲ್ತು" ಎಂದು.

[ ಸಂಜಯಂ ಪೋಪಂ ]

ಮಗನೆ, ಧೈರ್ಯಂಗೊಳ್, ನಾಳೆ ತೀರ್ಥಯಾತ್ರೆಗೆ ಪೋದ ಬಲದೇವಂ ಬರ್ಪಂ. ಇದೊಂದು ದಿವಸಂ ಮೈತ್ರೇಯರ ಶಾಪದಿಂ ನಿನಗೆ ಗಂಡಂ ; ಇದರ್ಕೆ ಕಾಲವಂಚನೆಯೆ ಮಂತ್ರಂ. ವೈಶಂಪಾಯನ ಸರೋವರಮಂ ಪೊಕ್ಕಿರ್ದು ಇಂದಿನೊಂದಿರುಳಂ ಕಳಿಪಿ ನಾಳೆ ಜಯಶೀಲನಾಗು.

ದುರ್ಯೋಧನಂ,—ಮಹಾತ್ಮರಾಶೀರ್ವಾದಂ !

[ ಪೋಗುತ್ತೆ ]

ಅರಿಯರ್ ಪಾಂಡವರವರೊಳ್
ವಿರೋಧಮಂ ಬಿಸುಟು ಸಂಧಿಯಂ ಮಾಡುವುದೆಂ
ಬರ ನುಡಿಯಂ ಕೇಳಲ್ಕೆಂ
ದೆರಡುಂ ಕಿವಿಗಳುಮನೆನಗೆ ಬಿದಿ ಮಾಡಿದನೇ ೧೦೩

ಕೊಳದೊಳ್ ಕಾಲವಂಚನಂ !
ದಿನಕರತನಯನ ದುಶ್ಶಾ
ಸನನ ವಿಯೋಗದೊಳಮಿನಿತುವರೆಗಂ ನೋವಿ
ಲ್ಲೆನಗೆ ತಲೆಗರೆದು ನೀರೊಳ್
ಕುನಿಯೆನೆ ನೊಂದೆಂ ನದೀಜನಭ್ಯರ್ಥನೆಯಿಂ ! ೧೦೪

ಆಕ್ಕೆ ! ಭೀಮನೊಳ್ ಸಂಧಿಯ ಮಾತು ಮಾಣ್ದುದು.

## ೪ನೆಯ ರಂಗಂ

[ ಕಿರಾತರ್ ಅಱಸುತ್ತುಂ ಪೋಗುವರ್—ಭೀಮಂ ಧರ್ಮರಾಜಂ ಕೃಷ್ಣಂ. ]

ಭೀಮಂ—ಎತ್ತಲಡಂಗಿದಂ ಆ ದ್ರೌಪದೀದ್ರೋಹನ್ !

ತೊದಳಾಯ್ತೆನ್ನಯ ಪೂಣ್ದ ಪೂಣ್ಕೆ ಸಭೆಯೊಳ್ ಪಾಂಚಾಲರಾಜಾತ್ಮಜಾ
ವದನಮ್ಲಾನತೆ ಮಾಣ್ದುದಿಲ್ಲೊಗೆದ ಮದ್ದೋರ್ದಂಡಕಂಡೂತಿ ತೀ
ರ್ದುದುಮಿಲ್ಲಿನ್ನು ಮಣಂ ಸುಯೋಧನವಧಕ್ಕೇಗೆಯ್ವೆನೆಂತಕ್ಕುಮೆಂ
ಬುದೆ ನಿಂದುತ್ಸುಕಚಿತ್ತಮುಮ್ಮಳಿಸುಗುಂ ಪಾಪಾತ್ಮನೇನಾದನೋ! ೧೦೫

ರಸೆಗಿೞಿದನೊ ಮೇಣ್ ನಾಲ್ಕುಂ
ದೆಸೆಗಳ ಕೋಣೆಗಳೊಳುೞಿದನೋ ಖಳನಿಲ್ಲೀ
ವಸುಮತಿಯೊಳ್ ಗಾಂಧಾರಿಯ
ಬಸಿಱಂ ಮೇಣ್ ಮಗುೞೆ ಪೋಗಿ ಪೊಕ್ಕಿರ್ದಪನೋ ! ೧೦೬

ಚರಮಚರಮೆಂಬ ಜಗದಂ
ತರದೊಳ್ ಖಳನೆಲ್ಲಿ ಪೊಕ್ಕೊಡಂ ತದ್ಭುಜಪಂ
ಜರದೊಳಗಿರ್ದೊಡೆ ಹರಿಹರ
ಹಿರಣ್ಯಗರ್ಭರ್ಕಳಲ್ಲಿಯುಂ ಕೊಲ್ಲದಿರೆಂ ೧೦೭

ಚತುರಂತಕ್ಷಿತಿಕಾಂತೆ ಕೇಳ್ ಜಲಧಿ ಕೇಳ್ ಸಪ್ತಾರ್ಚಿ ಕೇಳ್ ತಾತ ಮಾ
ರುತ ಕೇಳ್ ಮಾರುತಮಾರ್ಗ ಕೇಳ್ ಪಗೆವನಂ ಕೊಂದೆನ್ನ ಕೋಪಾಗ್ನಿಗಾ
ಹುತಿಮಾಳ್ಪೆಂ ಕೊಲಲಾಱದಂದು ತಱಿಸಂದಾನೆನ್ನನಿಂದಗ್ನಿಗಾ
ಹುತಿಮಾಳ್ಪೆಂ ಗಡಮೆಂದು ಪೂಣ್ದೊದಱಿದೆಂ ಕೌರವ್ಯಕೋಳಾಹಳಂ

ಧರ್ಮರಾಜಂ—ಭೀಮ, ಈ ಮಸಕಂ ಮಸಗಲ್ ತಗದು.

ಭೀಮಂ—ಓಹೊ ! ಧರ್ಮಶ್ರವಣಂ !

ಎನಿತುಂ ದ್ರೌಪದಿ ಮುಕ್ತಕೇಶಿ ನಮೆವಳ್ ತದ್ದುಃಖಮಂ ಕಂಡು ಕಂ
ಡನಿತುಂ ಸೈರಿಪೆವಾನುಮೆನ್ನನುಜರುಂ ಪಾಂಚಾಲಿಯಂ ನೋಡಿ ನೀಂ

ಮನದೊಳ್ ನೋವುದುಮಿಲ್ಲ ನಿಷ್ಕರುಣೆಯಯ್ ನೀನಿಂತಿರಾನನ್ನೆಗಂ
ಮುನಿಸಂ ತೀರ್ಚಲೊಡರ್ಚೆ ವೈರಿತರುವಂ ನಿರ್ಮೂಲನಂಮಾಡುವೆಂ
ಆನುಂ ವಿಧೇಯನಲ್ಲಂ
ನೀನುಂ ಗುರುವಲ್ಲಮಿಂದಿನೊಂದೆವಸದೊಳು
ರ್ವಿನಾಥ ಪರಿಯ ಬಿಡ ಕುರು
ಸೂನುವನಿರದಿಕ್ಕಿ ಮೆಟ್ಟಿ ಡೊಕ್ಕರಿಸಿದಪೆಂ ೧೧೦
ಮುಂದಲೆಯಂ ಪಿಡಿದೆನ್ನಯ
ಮುಂದೆಳೆದನಲಜೆಯನುಯ್ದು ಪರಿಭವಿಸಿಯೆ ದ
ಳ್ಳಿಂದುರಿದು ಸೊರ್ಕಿದವನಂ
ಕೊಂದೆಂ ಕುರುಪತಿಯುಮಂ ಕೊಲಲ್ ತಡೆದಪೆನೇ ೧೧೧

ಕೃಷ್ಣಂ—ಭೀಮ, ಮಾತಿನೊಳ್ ಕಾರ್ಯಮಾಗದು. ನೇಸಱುೞಿಯುತಿರ್ಕುಂ. ಮುಂದಱಿಸುವಂ, ಬಾ.

ಭೀಮಂ—ಎಲೆ ಎಲೆ ಸೈನಿಕರಿರಾ!

ಧೃತರಾಷ್ಟ್ರಾಪತ್ಯನಬ್ಜಪ್ರಿಯಸುತಸಖನೇಕಾದಶಾಕ್ಷೋಹಿಣೀಶಂ
ಕೃತಕದ್ಯೂತಸ್ವನಾಥೀಕೃತಯಮಸುತಭೀಮಾರ್ಜುನಂ ದ್ರೋಣಭೀಷ್ಮೋ
ಚಿತವಾಕ್ಯದ್ವೇಷಿ ಕೃಷ್ಣಾಂಬರಕಬರಿಹರಂ ಶೋಕತೀವ್ರಾಗ್ನಿದಗ್ಧಂ
ಸುತಶೋಕಾಕ್ರಾಂತನೆಲ್ಲಿರ್ದನೊ ನೃಪತಿಲಕಂ ನಿಮ್ಮ ರಾಜಾಧಿರಾಜಂ?
ಭರತಕುಲೇಂದುಕಳಂಕಂ
ಭರತಾನ್ವಯರಾಜಭವನರಾಜಕಪೋತಂ
ಕುರುಕೇತುವೆಲ್ಲಿದಂ ತ
ತ್ಕುರುಕುಲಲಯಕೇತು ಭೀಮಸೇನಂ ಬಂದಂ ೧೧೩

[ ತೆರೆಯೊಳ್ ]

ಕಿರಾತರ್—ಪಜ್ಜೆ! ಪಜ್ಜೆ!

ಭೀಮಂ—ಎಲ್ಲಿ? ಎಲ್ಲಿ ಪಜ್ಜೆ? [ ಪೋಗುವರ್ ]

## ೫ನೆಯ ರಂಗಂ

ಭೀಮಂ—ಎಲ್ಲಿ? ಎಲ್ಲಿ ಪಜ್ಜೆ?

ಕಿರಾತಂ—ಈ ಕೊಳದ ತಡಿಯೊಳ್.

ಭೀಮಂ—ಅವನದೆ! ಆಹಾ, ಪೊಱಮಟ್ಟ ಪಜ್ಜೆ!

ಕೃಷ್ಣಂ—ಇದು ಕಪಟಿಯ ತಂತ್ರಂ; ಭೀಷ್ಮನ ಕಾಲಹರಣಮಂತ್ರಂ.
ಒಳಗಿರ್ಪಂ; ಕೊಳನಂ ಮುತ್ತಿ ಪೊಱಮಡಿಸಿಂ.

[ಕಿರಾತರ್ ಪಱಿಯಂ ಪೊಯ್ವರ್]

ಧರ್ಮರಾಜಂ—ಇದೊಂದು ಲಜ್ಜೆಯಾಯ್ತು ಭರತಕುಲಕ್ಕೆ.

ಕೃಷ್ಣಂ—ಧರ್ಮಪ್ರಿಯ, ರಾಜ್ಯಲಕ್ಷ್ಮಿ ಪೇಸಿ ಬಿಸುಟ್ಟವಂ.

ತುಱುವಂ ಕಳಿಸುವ ಕೃಷ್ಣೆಯ
ನಿಱಿಯಂ ಪಿಡಿದುರ್ಚವೇೞ್ವಿ. ಕೊಳನಂ ಪಿಂದುಂ
ಪೆಱಗಾಗಿ ಪುಗುವ ದುರ್ನಯ
ಮಱಿಪವೆ ಕೌರವನ ರಾಜ್ಯದಾಯುವ ಕೇಡಂ ೧೧೪

ಧರ್ಮರಾಜಂ—ಅಂಕದ ಕಲಿ ಕುರುವಂಶಶ
ಶಾಂಕನೆ ದುರ್ಯೋಧನಾಂಕನನೆ ನೆಗೞ್ದಯಶಃ
ಪಂಕದೊಳಮೀ ಸರೋವರ
ಪಂಕದೊಳಂ ನೀನೆ ನಿನ್ನನಿಂತಪ್ಪಿದವರೇ ೧೧೫

ಕೃಷ್ಣಂ—ಮಾನಧನನೆನಿಸಿ ನಿನ್ನಭಿ
ಮಾನಕ್ಷತಿಮಾಡಿದಯ್ ಸುಯೋಧನ ನೀಂ ಮ
ತ್ತೀ ನೀರೊಳಗೆಸಡಿರ್ಕುಂ
ಮೀನಿರ್ಕುಂ ಕಪ್ಪೆಯಿರ್ಕುಮಿರ್ಪರೆ ಗಂಡರ್ ೧೧೬

ಭೀಮಂ— ಈ ಬೂತೆನ್ನ ಸರಂಗೇಳ್ದಲ್ಲದೆ ಪೊಱಮಡುವನಲ್ಲಂ.

ಭವದನುಜನರುಣಜಲಮಂ
ಸವಿನೋಡಿದೆನಿಂತು ನಿನ್ನ ಬಲಜಲನಿಧಿಯಂ

ಸವಿನೋಡಿದೆನೀ ಕೊಳನಂ
ತವೆ ಪೀರ್ದು ಬೞಿಕ್ಕೆ ನಿನ್ನ ಸವಿಯಂ ನೋೞ್ಪೆಂ ೧೧೭

ಸ್ವರಮಂ ಕೇಳಲ್ಕೆನ್ನು
ಗ್ರರೂಪಮಂ ನಿಂದು ನೋಡಲಣ್ಮದೆ ಸಮರಾ
ಕರಮಂ ಬಿಸುಟ್ಟು ಕಮಲಾ
ಕರಮಂ ಪೊಕ್ಕೆಲವೊ ಮರುಳೆ ಬರ್ದುಕಲ್ ಬಗೆವಾ ೧೧೮

ಜಲದೊಳ್ ಮೀನಿರ್ಪವೊಲ್ ನೀಂ ಕೊಳದೊಳೆ ಮುೞುಗಿರ್ದಕ್ಕಟಾ
ಕೋಡ ಸೇಡಿಂ
ಗೊಳಗಾದಯ್ ನಿನ್ನ ದುರ್ಯೋಧನವೆಸರ್ಗಿದು ಲಜ್ಜಾಕರಂ ತೋಱಿ
ದಯ್ ನಿ
ನ್ನಳವಂ ಚೀ ಸತ್ತರೇಂ ಪುಟ್ಟರೆ ಪೊಱಮಡು ನೀಂ ಕೈದುಗೊಳ್
ಕೌರವೇಂದ್ರಾ
ಚಳವಜ್ರಂ ಬಂದನೀಗಳ್ ಕುರುಕುಲಮಥನೋದ್ಭೀಕರಂ ಭೀಮ
ಸೇನಂ ೧೧೯

ಹರಿ ಸಂಧಾನಕ್ಕೆ ವಂದಂದವಗಡಿಸಿದಹಂಕಾರಮೆಲ್ಲಿತ್ತೊ ಕೃಷ್ಣಾಂ
ಬರಕೇಶಾಕೃಷ್ಟಿಯಂ ಮಾಡಿಸಿದ ಮದಮದೆಲ್ಲಿತ್ತೊ ಕೌಂತೇಯರಂ ಮ
ಚ್ಚರದಿಂ ಕಾಂತಾರದೊಳ್ ತಿಱ್ರನೆ ತಿರಿಪಿದ ಸೊರ್ಕೀಗಳೇನಾದುದೋ
ಪೇೞ್
ಕುರುವಂಶಾಧೀಶ, ನಾಂ ಮೂದಲಿಸುವೆನದಟಂ ಭೀಮನುದ್ದಾಮ
ಭೀಮಂ ೧೨೦

ದುರ್ಯೋಧನಂ—[ಎೞ್ದು] ಎಲ್ಲಿ ಭೀಮಂ ?

ಭೀಮಂ—ನಿನ್ನನುಜನರುಣಜಲಮಂ
ಮುನ್ನಂ ತವೆ ಪೀರ್ದೊಡಂಜಿ ನೀಂ ಪುಗ ಕೊಳನಂ

ಬೆನ್ನನೆ ಬಂದಾತಂ ಶೌ
ರ್ಯೋನ್ನತನೀಯಿರ್ದನಲ್ತೆ ಕೌರವಮಲ್ಲಂ ೧೨೧

ದುರ್ಯೋಧನಂ—ಎಲ್ಲಿರ್ದುದೊ ಈ ಗಂಡಗರ್ವಂ ಕೃಷ್ಣೆಯನೆಳೆದಾಡಿ ದಂದು, ಷಂಡ !

ನಾಲ್ಕಡಿಗಳೆದುಱೆ ಬೇರಂ
ಬೆಟ್ಕಿಯುಮಂ ತಿಂದು ವನದೊಳಡಗಿರೆ ನೀವುಂ
ನೀಟ್ಕಿರಿಸಿ ನಿಂದುವಿಾಗಳ್
ಪೇೞ್ ಕಮ್ಮೈಸುವರೆ ಬಿರುದುಮಂ ಬೀರಮುಮಂ ೧೨೨

ಪುಟ್ಟಂ ಸಟ್ಟುಗಮಂ ಬಿಸುಟ್ಟು ಗದೆಗೊಂಡೊಟ್ಟೈಸುವಂತುಟಾದುದೆ ?

ಎಸರನಿಡುವಕ್ಕಗರ್ಚುವ
ಬೆಸನುಂ ಕಯ್ಗಱಿವ ಕಂಚುಗರ್ಚುವ ಬೆಸನುಂ
ಬೆಸನಲ್ಲದೆ ಮತ್ಸ್ಯನ ಬಾ
ಣಸಿಗಂಗಾರಿತ್ತರೆಲವೊ ನಿನಗೀ ಬೆಸನಂ ೧೨೩

ಭೀಮಂ—ಪಿರಿಯಣ್ಣನ ನನ್ನಿಯನಾ
ದರದಿಂ ಕಾಯಲ್ಕೆ ಪೆಱರ್ಗೆ ಬಾಣಸುಗೆಯ್ದೆಂ
ಕುರುವಂಶಜ ಕೇಳ್ ನಿನ್ನೀ
ಶರೀರಮಾಂಸದೊಳೆ ಮರುಳ್ಗೆ ಬಾಣಸುಗೆಯ್ವೆಂ ೧೨೪

ಧರ್ಮರಾಜಂ—ಭೀಮಾ, ದಾಯಿಗತನದೆ ಮುನ್ನೆ ಗೆಯ್ದಧರ್ಮಮಂ ನೆನೆಯದೆ ನಿರ್ಮಲಕ್ಷತ್ರಧರ್ಮಮಂ ನೆನೆ. ಸುಯೋಧನ,

ಆಗದು ಸಮರಂ ಗುಣಯುತ
ನಾಗು ಮಹಾಭೋಗಿಯಾಗು, ನಿನ್ನಾಳ್ವ ಮಹೀ

ಭಾಗಮುಮಂ ಸಕಲಮಹೀ
ಭಾಗಮುಮಂ ನೀನೆ ಕೊಂಡು ಸುಖಮಿರಲಾಗಾ ೧೨೫

ಧರಣೀಚಕ್ರಮನೊಪ್ಪುಗೊಳ್ ಬಗೆಯದಿರ್ ವಿದ್ವೇಷಮುಂ ನಮ್ಮನೈ
ವರನಿನ್ನಾಳ್ವಿಸಕ್ಕೈಸಿಕೊಳ್ ನೆನೆಯದಿರ್ ಕೀಚಪ್ರಕಿನೊಳ್ ತೊಟ್ಟು ಕೊಂ
ಡಿರದೆಮ್ಮೊಂದುದನಿಂಬುಕಯ್ ಮನದೊಳೊಳ್ಪಿಂ ಶಾಂತಿವಿಶ್ರಾಂತಿಸೋ
ದರನೆಂಬಂತುಪಶಾಂತಿಯಂ ಕುರುಕುಲಕ್ಷ್ಮಾಪಾಲಚೂಡಾಮಣೀ ೧೨೬

ಕೃಷ್ಣಂ—ದುರ್ಯೋಧನ, ಧರ್ಮಜಂ ಕೃಪೆಯಿಂದೊಳ್ಳಿತಂ ಪೇಳ್ದಪಂ;
ಈಗಳುಂ ಕೇಳ್ದು ಬರ್ದುಕು.

ದುರ್ಯೋಧನಂ—ನೀಂ ಗಡ! ಮಧ್ಯಸ್ಥಂ ನುಡಿ
ವಂ ಗಡ! ಪುದುವಾಳ್ಕೆಯೆನಗಮುವರ್ಗಂ! ಸಂಧಾ
ನಂ ಗಡ! ಸಂಧಿಯ ಮಾತಂ
ಲಂಘಿಸಿದೆಂ ಮುನ್ನಮಿನ್ನೆರಲ್ನುಡಿದಪೆನೇ ೧೨೭

ಭೀಮ, ಇದೇಂ ಮಾತುಗಾಱಿಕೆ! ಬಾ, ಪೊಣರ್! ನಿಡುಬಯ
ಕೆಯ ಗದಾಯುದ್ಧಂ ಸಾರ್ದುದು. ಕಯ್ವೊಯ್!

[ದ್ವಂದ್ವಯುದ್ಧಂ]

ದುರ್ಯೋಧನಂ—ಇದು ಕಳಿಂಗನಂ ನುಂಗಿದ ದರ್ಪಕ್ಕೆ.
ಭೀಮಂ—ಇದು ಲಾಕ್ಷಾಗೇಹದಾಹಕ್ಕೆ.
ದುರ್ಯೋಧನಂ—ಕುರುಬಾಲರಂ ತಿಂದ ರಕ್ಕಸತನಕ್ಕೆ.
ಭೀಮಂ—ಕೃತ್ರಿಮವಿಷಾನ್ನಕ್ಕೆ; ಜೂದಿಂಗೆ.
ದುರ್ಯೋಧನಂ—ದುಶ್ಶಾಸನರಕ್ತಮಂ ಪೀರ್ದ ಪಿಶಾಚಕ್ಕೆ.
ಭೀಮಂ—ಪಾಂಚಾಲೀಪ್ರಪಂಚಕ್ಕೆ.
ದುರ್ಯೋಧನಂ—ಕರ್ಣಂಗೆ! (ಭೀಮಂ ಬೀೞ್ವಂ)
ಕೃಷ್ಣಂ—ಬಿೞ್ದಂ ಭೀಮಂ.

ದುರ್ಯೋಧನಂ—ಇದು ಧರ್ಮಯುದ್ಧಂ; ಪೊಯ್ಯೆಂ ಬಿೞ್ದಿನಂ. ಇರಿಂ,
ಎೞ್ಚಱಿಸುವೆಂ ಗದೆಯ ಗಾಳಿಯಿಂ.

ಭೀಮಂ—ಕೃಷ್ಣೇ! ಕೃಷ್ಣೇ!

ಕೃಷ್ಣಂ—ಸತ್ಯಾಶ್ರಯ, ಊರುಭಂಗಪ್ರತಿಜ್ಞೆ ಏನಾಯ್ತು ?

ದುರ್ಯೋಧನಂ—(**ತೊಡೆಯಂ ತಟ್ಟಿ**) ಭಂಗಮಾಯ್ತು !

(ಯುದ್ಧಂ. ದುರ್ಯೋಧನಂ ಬೀೞ್ವಂ)

ಭೀಮಂ—ಕೃಷ್ಣೇ, ಕೌರವಕುಳಕಾಳರಾತ್ರಿ, ಬಾ, ನೋಡು ಬಾ,
ಊರುಭಂಗಂ — ಕಿರೀಟಭಂಗಂ. [ಒದೆವಂ]

ಧರ್ಮರಾಜಂ—ಆಗದಾಗದು. ಏಕಾದಶಾಕ್ಷೋಹಿಣೀಪತಿಯಪ್ಪ ರಾ
ಜಾಧಿರಾಜನಂ ಪರಾಭವಿಸದಿರ್. ಆಹ !

ಇಡೆ ತೊಡೆಯನುಡಿದು ನೆಟ್ಟನೆ
ಕೆಡೆಯುತ್ತುಂ ಕರ್ಚಿ ನೆಲನನಾನಿದನೆಂತುಂ
ಬಿಡೆನೆಂಬ ತೆಱದೆ ಕುಲಗಿರಿ
ಕೆಡೆದಂದದೆ ಕೆಡೆದು ಕೌರವೇಂದ್ರಂ ಮೆಱೆವಂ ೧೨೮

[**ದುರ್ಯೋಧನನಂ ಸಂಶ್ಲೈಸುವಂ**]

ಭೀಮಂ—ನೋಡು, ಕಣ್ಣಾರ್ವಿನಂ ನೋಡು ; ಯಾಜ್ಞಸೇನಿ,
ಮುಳಿಸಿಂ ನಂಜಿಕ್ಕಿ ಕೊಂದಂದಿನ ಜತುಗೃಹದೊಳ್ ಸುಟ್ಟ ಕೌಟಿಲ್ಯದುರ್ವೀ
ತಳಮಂ ಜೂದಾಡಿ ಗೆಲ್ದಂದಿನ ನಿಜಕಬರೀನೀವಿಬಂಧಂಗಳಂ ದೋ
ರ್ವಳದಿಂದಂ ತಮ್ಮನಿಂ ತಾಂ ತೆಗೆಯಿಸಿ ನಡೆದಾ ನೀಚನಾ ದ್ರೋಹನಾ ಚಂ
ಚಳನಾ ಚಂಡಾಲನಾ ಪಾತಕನಿರವನಿದಂ ನೋಡು ಪಂಕೇಜವಕ್ತ್ರೇ! ೧೨೯

ಅರಸಂ ದೀಕ್ಷಿತನಿಲ್ಲಿ ಋತ್ವಿಜರೆಮೆಮ್ಮೊಳ್ ನಾಲ್ವರುಂ ಸಂಗರಾ
ಧ್ವರದೊಳ್ ತಾನುಪದೇಶಕಂ ಮುರಹರಂ ನೀನುಂ ಗೃಹೀತವ್ರತಾ
ಚರಣವ್ಯಾಪಿಕೆ ಮೇಣ್ ಭವತ್ಪರಿಭವಂ ಸಂಚಾರಕಂ ಕೌರವೇ
ಶ್ವರನೀತಂ ಪಶುವಾಗೆ ಬೇಳ್ದೆನಿವನಂ ಕೋಪಾಗ್ನಿಯಿಂದಗ್ನಿಜೇ ೧೩೦

ಸುಹುತಂ ಕೌರವ್ಯಕ್ರ
ವ್ಯಹವ್ಯದಿಂದೆನ್ನ ಕೋಪಹವ್ಯವಹಂ ದು
ರ್ವಹದುರ್ಯೋಧನದೇಹ
ಪ್ರಹರಣಲೋಹಿತದಿನಾದುದವಭೃಥಸವನಂ ೧೩೧

ಪಗೆ ಮಡಿದುದು, ಮುಡಿ.

ದ್ರೌಪದಿ—ಅಭ್ಯಾಸಂ ಪೋಗಿ ಮಱೆದೆಂ. ಪಗೆಯುಂ ಮಡಿಯಿಸಿದ ನೀನೆ ಮುಡಿಯಲ್ವೇಱ್ಕುಂ.

ಭೀಮಂ—ಆಯ್ತು ವೇಣೀಸಂಹಾರಂ. ಸ್ಮರಸಂಜೀವನೆ ಕೃಷ್ಣೆ ಪೂಮುಡಿದಳ್. ಅಹೋ, ಶೃಂಗಾರಂ, ವಿಭ್ರಮಂ, ಬೆಡಂಗು, ಬಿಂಕಂ! ಇಂತಾಗವೇಡಾ ಪೆಣ್ಗಿಲ್ಲು? ಈಕೆಯ ನಗೆಗಣ್ನೋಟದಿಂ ಸಮರಶ್ರಮಂ ಕಳೆದುದು.

ಪನ್ನೆರಡುಬರಿಸಮೊಳಗೆಯೆ
ಒನ್ನದ ನೆಸಪಿಂದೆ ಬೆಂದಬಿಲ್ ಪಿಂಗಲೊಡಂ
ತನ್ನಿಂ ಕಾಳಿಕೆ ಪಿಂಗಿದ
ಪೊನ್ನಂತೀ ಕಾಂತೆ ಕಣ್ಗೆ ತೊಳಗುತ್ತಿರ್ಪಳ್ ೧೩೨

ಪ್ರಿಯೆ, ಬಾ, ಬೀಡಿಂಗೆ. [ ಭೀಮನುಂ ದ್ರೌಪದಿಯುಂ ಪೋಪರ್ ]

ಧರ್ಮರಾಜಂ—ಕೃಷ್ಣಾ, ಕೃಷ್ಣಾ! ವಿಜಯೋನ್ಮತ್ತರಿವರ್ ಕಾಣರ್, ನಾಂ ಕಾಣ್ಬೆಂ, ಭೀಮನ ತಲೆಯ ಮೇಲಾಡುವ ಘೋರಮೂರ್ತಿಗಳಂ. ಮಹಾಪಾತಕಂ ಭ್ರಾತೃಹತ್ಯಂ. ಕಾವುದು ಕಾವುದು ವತ್ಸನಂ!

ಕೃಷ್ಣಂ—ನಿನ್ನ ಧರ್ಮಮೇ ಕಾವುದು. ಬಾ, ಎಲ್ಲರುಂ ನೀಲಾಚಲಕ್ಕೆ ಪೋಗಿ ಮಹಾಶಿವನನಾರಾಧಿಸಿ ಬರ್ಪ ಬಾಧೆಯಂ ನೂಂಕುವಂ. ಇಂದು ನಿಮಗಾದಳ್ ಕೌರವನ ಲಕ್ಷ್ಮಿ.

[ ಪೋಪರ್. ]

[ ಲಕ್ಷ್ಮಿ ದುರ್ಯೋಧನನತ್ತಣಿಂ ಪೊಱಮಡುವಳ್—ಅಶ್ವತ್ಥಾಮಂ ]

ಅಶ್ವತ್ಥಾಮಂ—ಭೀಷ್ಮರ್ ಪೇೞ್ದ ಕೊಳಂ ಇದೆ ಅಕ್ಕುಂ. ಕೌರವೇಶ್ವರನಂ ಕೂಡಿ, ಪಾಂಡವರಂ ಧ್ವಂಸಂಮಾೞ್ಪಂ.—ಆರೀಕೆ ? ಸರೋವರಲಕ್ಷ್ಮಿಯೊ ? ನೀನಾರ್ಗೆ ? ಎತ್ತಣಿಂದಂ ಬಂದೆ ? ಎಲ್ಲಿಗೆ ಪೋದಪೆ ?

ಲಕ್ಷ್ಮಿ—

ಅಮೃತಪಯೋಧಿಮಂಥನದೆ ಪುಟ್ಟಿದೆನಬ್ಜಭವಾಂತರಾಳದೊಳ್
ರಮಿಯಿಪ ಪದ್ಮನಾಭನುರದೊಳ್ ನೆಲಸಿರ್ಪ ಮಹಾನುಭಾವೆಯೆಂ
ಕಮಲೆಯೆನಿನ್ನೆಗಂ ಕುರುಮಹೀಪತಿಯೊಳ್ ನೆಲಸಿರ್ದೆನೀಗಳು
ತ್ತಮಪುರುಷೋತ್ತಮಂ ಬೆಸಸೆ ಪಾಂಡವರೊಳ್ ನೆಲಸಲ್ಕೆ ಪೋದಪೆಂ

ಅಶ್ವತ್ಥಾಮಂ—ಪಾಂಡವರೊಳ್ ಪೋದಪೆನ್ ! ಆ ಗೋವಾಳಂ ಕೃಷ್ಣನೊಡನಿರ್ದು ಗೋಪಿಯಾದ ಮೂಢೆ,

ಕಲಿ ಪಂದೆಯೆಂದು ಬಗೆಯದೆ
ಕುಲಜಂ ಕುಲಹೀನನೆಂದು ಬಗೆಯದೆ ತರುಣಂ
ಸಲೆ ವೃದ್ಧನೆಂದು ಬಗೆಯದೆ
ನೆಲಸುವೆ ನಿನ್ನಿಂ ನಿಕೃಷ್ಟರೆಂಬರುಮೊಳರೇ ೧೩೪

ಇೞಿಯಿಸುವೆ ತಂದೆಮಕ್ಕಳ
ನಿೞಿಯಿಸುವಯ್ ಸೋದರರ್ಕಳಂ ತಮ್ಮೊಳ್ ತ
ಳ್ತಿಱಿಯಿಸುವಯ್ ಗುರುಶಿಷ್ಯರ
ನೞಿಗುಲಿ ನಿನ್ನಿಂ ನಿಕೃಷ್ಟರಾದರುಮೊಳರೇ ೧೩೫

ಪಾಂಡವರೊಳ್ ಪೋದಪೆನ್ !

ಪೋ ಮಾಣ ಧರ್ಮಜಂ ಗಡ !
ಭೀಮಂ ಗಡ ! ಫಲ್ಗುಣಂ ಗಡಮಳರ್ ಗಡ ! ಸಂ

ಗ್ರಾಮದೊಳವಂದಿರಶ್ವ
ತ್ಥಾಮಂಗಾಪೋಶನಂಗೊಳಲ್ ನೆಱೆದಪರೇ ೧೩೬

ನಿನ್ನ ಮುರವೈರಿಯುಳವುಮ
ನೆನ್ನಳವುಮನೆಲಗೆ ಕಾಣ್ಬೆ ಕುರುಪತಿಯಿಂದಂ
ಮುನ್ನಂ ತ್ವತ್ಪತಿಯಿಂದಂ
ನಿನ್ನನಗಲ್ದುಲ್ಕೆ ಕಪಟಗೋಪಂ ಪ್ರಭುವೇ? ೧೩೭

ತೊಲ್ತೆ, ನಡೆ ಕೌರವೇಶ್ವರನಲ್ಲಿಗೆ! (ಎೞೆದುಯ್ವಂ)

ಲಕ್ಷ್ಮೀ—ಅತ್ತಲಸುರಾರಿ ಬೆಸಸಿದ
ನಿತ್ತಲ್ ರುದ್ರಾವತಾರನೆೞೆದುಯ್ದಪನೇ!
ಅತ್ತ ಪುಲಿ! ಇತ್ತ ದರಿ! ಇ
ನ್ನೆತ್ತಣ್ಗಡಿಯಿಟ್ಟು ಪೋಪುದೋ ನಾನಱಿಯೆಂ ೧೩೮

ದುರ್ಯೋಧನಂ—(ನರಳ್ವಂ) ಮಾನಭಂಗಂ! ಮಾನಭಂಗಂ!

ಅಶ್ವತ್ಥಾಮಂ—ಕೌರವಚಕ್ರವರ್ತಿ! ಇದೇನಿದು!

ಕುಳಿಕನ ಪಲ್ಗಳಂ ಮುಱಿಯೆ ಮೋದಿದರಾರ್ ಕಡುಪಿಂದೆ ಸಿಂಹಮಂ
ಮುಳಿಯಿಸಿ ಪಲ್ಗಳಂ ಪಿಡಿದು ಕಿೞ್ತಿವರಾರ್ ಮದಹಸ್ತಿಯುಂ ಭಯಂ
ಗೊಳೆ ನೆಲಕಿಕ್ಕಿ ಕೋಡೆರಡುಮಂ ಕುಸಿಯೊತ್ತಿದರಾರ್ ಸುರಾದ್ರಿನಿ
ಶ್ಚಳನಿಬಿಡೋರುಮಂಡಲಮನಾರುಡಿದರ್ ಫಣಿರಾಜಕೇತನಾ ೧೩೯

ಹಾ ಕುರುವಂಶಮಹಾಕಮ
ಲಾಕರಕಲಹಂಸ! ಹಾ! ಸಮುದ್ರಾಂತಧರಾ
ಶ್ರೀಕಾಂತ ಹಾ! ಫಣೀಂದ್ರಪ
ತಾಕಾ! ವಿಧಿವಶದೆ ನಿನಗಮೀಪರಿಯಾಯ್ತೇ ೧೪೦

ಮೇಲುದಱ ಸೆಱಂಗಿಂದೀ ತಲೆಯ ಧೂಳಂ ತೊಡೆವೆಂ.

ದುರ್ಯೋಧನಂ—ಅಶ್ವತ್ಥಾಮ,

ಅರಿಚರಣಪಾಂಸು ಪತ್ತಿರೆ
ಕರಾಗ್ರದಿಂ ತೊಡೆದು ಕಳೆದೆ ವಸ್ತ್ರಾಂಚಲದಿಂ
ಗುರುನಂದನ ನೀನೆನ್ನೀ
ಪರಿಭವಪಾಂಸುವನದೆಂತು ಪೇೞ್ ಕಳೆದಪೆಯೋ ೧೪೧

ಅಶ್ವತ್ಥಾಮಂ—ಎನ್ನಂ ವಂಚಿಸಿ ಬಂದುದ
ಱನ್ನಿನಗಿನಿತಾಯ್ತವಸ್ಥೆ ಕುರುಪತಿ ನೀನಿಂ
ದೆನ್ನಿಂ ಪ್ರತಿಕಾರಮನಱಿ
ಪಿನ್ನಂ ನೋಡೆನ್ನ ಶಕ್ತಿಯಂ ಭಕ್ತಿಯುಮಂ ೧೪೨

ದುರ್ಯೋಧನಂ—ಹತದೇಹ ಹತಭುಜದ್ವಯ
ಹತೋರು ಹತಹೃದಯ ಹತಕಿರೀಟಂಗೆನಗಂ
ಪ್ರತಿಕಾರಮೆಂಬುದುಂಟೇ ?
ಗತಿಯಂ ಸಾಧಿಸುವುದಲ್ತೆ ತಾಂ ಪ್ರತಿಕಾರಂ ೧೪೩

ಅಶ್ವತ್ಥಾಮಂ—ಪೇೞ್, ಮಾೞ್ಪೆಂ.

ದುರ್ಯೋಧನಂ—ಭೀಮನ ತಲೆಯಂ ತಂದಪೆಯ ? ಕಣ್ಣಾರೆ ಕಂಡು ತೊೞಲಿಲ್ಲದೆ ಸಾವೆಂ.

ಅಶ್ವತ್ಥಾಮಂ—ಇದಾವ ಗಹನಂ ! ಪ್ರಭುಗೆನ್ನ ಕಡೆಯ ಸೇವೆ. ನಾಂ ಬರ್ಪನ್ನಂ ಪ್ರಾಣಮಂ ನಿಲಿಸಿರು. ಎಲಗೆ ಲಕ್ಷ್ಮೀ, ಚಕ್ರವರ್ತಿಗೆ ಚಾಮರಮಿಕ್ಕುತಿರು ! (ಪೋಪಂ)

ಲಕ್ಷ್ಮೀ—

ನುಡಿದುದನೆಯ್ದೆ ತುತ್ತತುದಿಯೆಯ್ದುವಿನಂ ನುಡಿದಂ ಚಲಂ ಚಲಂ
ಬಿಡಿದುದನೆಯ್ದೆ ಮುಂ ಪಿಡಿದುದಂ ಸಲೆ ಪೂಣ್ದು ಪೂಣ್ಕೆ ನೇ

ರ್ಪಡೆ ನಡೆವನ್ನೆಗಂ ನಡೆದನಳ್ಕದೆ ಬಳ್ಕದೆ ತನ್ನೊಡಲ್ ಪಡ
ಲ್ವಡುವಿನಮುಣ್ಮುಗುಂದದೆನಲೇನಭಿಮಾನಧನಂ ಸುಯೋಧನಂ! ೧೪೪

[ ಅಶ್ವತ್ಥಾಮಂ ]

ಅಶ್ವತ್ಥಾಮಂ—ಇದಿಕೊಳ್, ನಿನ್ನ ನಚ್ಚಿನ ಪಾಂಡವರೈವರ ತಲೆಗಳ್, ನಿನ್ನ ಕಾಲಮೇಲೆ.

ದುರ್ಯೋಧನಂ—ಭೀಮನೆಲ್ಲಿ?

ಪವನಜನಾಸ್ಯಮಲ್ತಿದವನಾನನಮಪ್ಪೊಡೆ ಮಟ್ಟಮಿರ್ದು ನೋ
ಡುವುದೆ ಮದೀಯವಕ್ತ್ರಮನೆ ಕೆಮ್ಮನೆ ಪೋಯ್ತುಱುವಿಲ್ಲದಾಯ್ತು ಪಾಂ
ಡವರ ಶಿರಂಗಳಲ್ಲಿವು ಕೃಷ್ಣೆಯ ಸೂನುಗಳಪ್ಪ ಪಂಚಪಾಂ
ಡವರ ಶಿರಂಗಳಂ ನೆಱೆ ವಿಚಾರಿಸದಕ್ಕಟ ಕೊಂಡುಬರ್ಪುದೇ ೧೪೫

ಪರಮೇಶ್ವರಾವತಾರನೆ
ಪರಮಜ್ಞಾನಿಯೆ ವಿವೇಕವಿಕಳರವೋಲ್ ಬಾ
ಲರ ತಲೆಯನರಿದು ತಂದೆಯೊ
ದೊರೆಕೊಂಡುದು ನಿನಗೆ ಪಾತಕಂ ಬಾಲವಧಂ ೧೪೬

ಇದೆಲ್ಲಂ ಕೃಷ್ಣನ ಮಾಯೆ! ಹರಿಹರಿ! ಪೋಗು. ಇದರ್ಕೆ ಪ್ರಾಯಶ್ಚಿತ್ತಮಂ ಮಾಡು. ದೈವದ ಮುಂದೆ ನಾಮಲ್ತು. (ಸಾವಂ)

ಅಶ್ವತ್ಥಾಮಂ—ನೊಂದ ಜೀವಂ ತಣ್ಣಗಾಯ್ತು. ಮಹಾನುಭಾವ, ನಿನಗೆ ಸುಗತಿಯಕ್ಕೆ. ಎಲೆ, ಮಿಂಚುವ ಕೂರಸಿಗಳ ಮೇಲೆ ಚಂಚಲಿಸುವ ರಾಜ್ಯಲಕ್ಷ್ಮಿ, ನಿನ್ನಾ ಧೂರ್ತರಂ ಪತ್ತು, ನಡೆ.

[ ಲಕ್ಷ್ಮಿ ಪೋಪಳ್ ]

ತಪೋವನಮೆ ಇನ್ನೆನಗೆ ಬಾಳ್ತೆ—ಅದೊ, ಸೂರ್ಯದೇವನಿಳಿವಂ

ಪಂಕಜಮುಂ ಸುಹೃದ್ವದನಪಂಕಜಮುಂ ಮುಗಿವನ್ನಮುಗ್ರತೇ
ಜಂ ಕಿಡುತಿರ್ಪಿನಂ ನಿಜಕರಂಗಳನಂತುಡುಗುತ್ತುಮಿರ್ದು ಚ
ಕ್ರಾಂಕಮಗಲ್ವಿನಂ ಕ್ರಮದಿನಂಬರಮಂ ಬಿಸುಟುರ್ಬಿನಂಧಕಾ
ರಂ ಕವಿತರ್ಪಿನಂ ಕುರುಕುಲಾರ್ಕನುಮರ್ಕನುಮಸ್ತಮೆಯ್ದಿದರ್ ೧೪೭

[ ತೆರೆ ]

———